# CANARESE PRAYERS

# ಪ್ರಾರ್ಥನೆಗಳು

ಎರಡು ಸಾಮಾನ್ಯ ಪ್ರಾರ್ಥನೆಗಳು

ಮೂರು ವಾರಗಳಿಗೆ ನಾಲ್ವತ್ತೆರಡು ಪ್ರಾರ್ಥನೆಗಳು

ದೇವರ ಆಶೀರ್ವಾದವು ಮನೆಮಾರುಗಳ ಮೇಲೆ ಬರ ಬೇಕೆಂಬುವದಕ್ಕೆ
ಮಾಡುವ ಪ್ರಾರ್ಥನೆ

ಸಾಯಲಾಗಿರುವವರ ಕಿವಿಯಲ್ಲಿ ಹೇಳ ತಕ್ಕ ಮಾತುಗಳು

ಮೂರನೇ ಛಾಪೆ.

MANGALORE:
PRINTED BY STOLZ & REUTHER, BASEL MISSION PRESS
1870

# CANARESE PRAYERS.

# ಸಾಮಾನ್ಯ ಪ್ರಾರ್ಥನೆಗಳು.

## ಮುಂಜಾನೆ ಹೇಳ ತಕ್ಕ ಪ್ರಾರ್ಥನೆ.

ಪರಲೋಕದಲ್ಲಿರುವ ನಮ್ಮ ಪ್ರಿಯ ತಂದೆಯೇ! ನೀನು ಕಳದ ರಾತ್ರಿಯಲ್ಲಿ ಯಾವ ಕೇಡೂ ಮೋಸವೂ ನಮಗೆ ಬಾರದ ಹಾಗೆ ನಮ್ಮನ್ನು ಕಾಪಾಡಿ, ಶರೀರಸೌಖ್ಯವನ್ನು ದಯಪಾಲಿಸಿ, ಈ ಹೊಸ ದಿವಸದ ಬೆಳಕನ್ನು ನೋಡುವ ಹಾಗೆ ನಮಗೆ ಕೃಪೆ ಮಾಡಿದದರಿಂದ, ನಿನ್ನ ಪ್ರಿಯ ಮಗನಾದ ಯೇಸು ಕ್ರಿಸ್ತನ ಮೂಲವಾಗಿ ನಿನಗೆ ಸ್ತೋತ್ರ ಮಾಡುತ್ತೇವೆ.

ಕರ್ತನೇ, ನೀನು ನಮ್ಮ ಪಾಪಗಳನ್ನೂ ಶಾಪಕ್ಕೆ ತಕ್ಕ ಸ್ಥಿತಿಯನ್ನೂ ನೆನಸದೆ, ಯೇಸು ಕ್ರಿಸ್ತನ ನಿಮಿತ್ತ ತಂದೆಯ ಪ್ರೀತಿಯಿಂದ ನಮ್ಮನ್ನು ಅಂಗೀಕಾರ ಮಾಡಿ, ಶಿಕ್ಷೆ ಕೊಡದೆ, ಯಾವಾಗಲೂ ಕೃಪೆ ಮಾಡಿ, ನಮ್ಮ ಶರೀರಗಳಿಗೂ ಆತ್ಮಗಳಿಗೂ ಲೆಖ್ಖವಿಲ್ಲದ ಉಪಕಾರಗಳನ್ನು ಮಾಡುತ್ತಾ ಬರುವದರಿಂದ, ನಿನಗೆ ಸ್ತೋತ್ರವೂ ಮಹಿಮೆಯೂ ಮಾನವೂ ಆಗಲಿ!

ಇದಲ್ಲದೆ ನೀನು ನಮ್ಮ ಪ್ರಿಯ ತಂದೆತಾಯಿಗಳನ್ನೂ ಸಹೋದರರನ್ನೂ ಮಕ್ಕಳನ್ನೂ ಸ್ನೇಹಿತರನ್ನೂ ಕೃಪೆಯಿಂದ ಕಾಪಾಡಿ, ನಿನ್ನ ಸಭೆಯವರಿಗೂ ಲಕ್ಷಾನುಲಕ್ಷ ಮನುಷ್ಯರಿಗೂ ನಿನ್ನ ಕೈ ಉಂಟು ಮಾಡಿದ ಎಲ್ಲಾ ಸೃಷ್ಟಿಗಳಿಗೂ ಹೊಸದಾಗಿ ಜೀವವನ್ನುಂಟು ಮಾಡಿದದರಿಂದ, ನಿನ್ನನ್ನು ಸ್ತುತಿಸುತ್ತೇವೆ. ನೀನು ಎಲ್ಲರ ಮೇಲೆ ಕೃಪೆಯುಳ್ಳವನಾಗಿದ್ದು, ನಿನ್ನ ಕೈ ಉಂ

ಟು ಮಾಡಿದವರೆಲ್ಲರ ಮೇಲೆ ಕನಿಕರ ಮಾಡುತ್ತೀ. ಒಳ್ಳೆಯವರ ಮೇಲೆಯೂ ಕೆಟ್ಟವರ ಮೇಲೆಯೂ ನಿನ್ನ ಸೂರ್ಯನನ್ನು ಉದಯವಾಗ ಮಾಡುತ್ತೀ. ನಿನ್ನ ಕೈ ಚಾಚಿ, ಜೀವರಾಶಿಗಳನ್ನೆಲ್ಲ ಆನಂದದಿಂದ ತೃಪ್ತಿಯಾಗ ಮಾಡುತ್ತೀ.

ಹೀಗಿರುವದರಿಂದ ನಮ್ಮ ಬಾಯಿ ನಿನ್ನ ಸ್ತುತಿಯನ್ನು ಸಾರಿ ಹೇಳಲಿ! ಜೀವರಾಶಿಗಳೆಲ್ಲ ಎಂದೆಂದಿಗೂ ನಿನ್ನ ಪರಿಶುದ್ಧ ನಾಮವನ್ನು ಹೊಗಳಲಿ!

ಕರ್ತನೇ, ನಮ್ಮ ಆಶ್ರಯವೂ ನಮ್ಮ ರಕ್ಷಕನೂ ಆಗಿರುವವನೇ, ನಮ್ಮ ಬಾಯಿಯ ಮಾತುಗಳೂ ನಮ್ಮ ಹೃದಯದ ಸಂಭಾಷಣೆಯೂ ನಿನಗೆ ಸಮರ್ಪಕವಾಗಿರಲಿ! ನಿನ್ನ ಮುಖವನ್ನು ನಮಗೆ ಮರೆ ಮಾಡದೆ, ನಿನ್ನ ಆಳುಗಳನ್ನು ಕೋಪವಾಗಿ ತಳ್ಳಿ ಹಾಕ ಬೇಡ. ನಾವು ನಿನಗೆ ವಿರೋಧವಾಗಿ ಮಾಡಿದ ಪಾಪಗಳನ್ನೆಲ್ಲ ಮನ್ನಿಸ ಬೇಕೆಂದು ಬೇಡಿ ಕೊಳ್ಳುತ್ತೇವೆ. ಈ ರಾತ್ರಿಯಲ್ಲಿಯೂ ನಮ್ಮ ಮನಸ್ಸಿನೊಳಗೆ ಇದ್ದ ದುರಾಲೋಚನೆಗಳನ್ನೆಲ್ಲ ಕೃಪೆಯಾಗಿ ಮನ್ನಿಸ ಬೇಕು. ಓ ಕರ್ತನೇ, ನಮ್ಮ ಒಬ್ಬನೇ ಮಧ್ಯಸ್ಥಗಾರನೂ ಹೊಣೆಗಾರನೂ ರಕ್ಷಕನೂ ಆಗಿರುವಂಥ, ನಿನ್ನ ಪ್ರಿಯ ಮಗನಾದ ಯೇಸು ಕ್ರಿಸ್ತನ ಬೆಲೆಯುಳ್ಳ ರಕ್ತವನ್ನು ನಮ್ಮ ಮೇಲೆ ಚಿಮಿಕಿಸು. ನಾವು ಶುದ್ಧರಾಗುವ ಹಾಗೆ ನಮ್ಮ ಪಾಪಗಳಿಗೆ ಪ್ರಾಯಶ್ಚಿತ್ತ ಮಾಡು. ನಾವು ಹಿಮದಂತೆ ಬಿಳುಪಾಗುವ ಹಾಗೆ ನಮ್ಮನ್ನು ತೊಳಿ. ನಮ್ಮ ಪಾಪಗಳಿಗೆ ನಿನ್ನ ಮುಖವನ್ನು ಮರೆ ಮಾಡಿ, ನಮ್ಮ ಅಕ್ರಮಗಳನ್ನೆಲ್ಲ ಪರಿಹರಿಸು. *ದೇವರೇ, ನಮ್ಮೊಳಗೆ ನವೀನ ಹೃದಯಗಳನ್ನು ಉಂಟು ಮಾಡಿ, ಹೊಸ ನಿಶ್ಚಯ ಉಳ್ಳ ಆತ್ಮವನ್ನು ನಮಗೆ ಕೊಡು. ನಮ್ಮನ್ನು ನಿನ್ನ ಸಮ್ಮುಖದಲ್ಲಿಂದ ತೆಗದು ಹಾಕದೆ, ನಿನ್ನ ಪರಿಶುದ್ಧಾತ್ಮವನ್ನು ನಮ್ಮಿಂದ ತೊಲಗಿಸ ಬೇಡ.

ಓ ನಮ್ಮ ಕರ್ತನೇ, ನಮ್ಮ ದೇವರೇ, ನಿನ್ನ ಬಳಿಯಲ್ಲಿ ಮಾ

---

*ಕೀರ್ತನೆ ೫೧, ೧೧.

ತ್ರ ಜೀವದ ವರ್ತೆ ಉಂಟು. ನಿನ್ನ ಬೆಳಕಿನಲ್ಲಿಯೇ ನಾವು ಬೆಳಕನ್ನು ನೋಡುತ್ತೇವೆ. ನೀನೊಬ್ಬನೇ ನಮಗೆ ಆಶ್ರಯವಾಗಿದ್ಧೀ. ಹೀಗಿರುವದರಿಂದ ನಮ್ಮ ನಡತೆ ಎಲ್ಲಾ ನಿನಗೆ ಸಮರ್ಪಕವಾಗುವ ಹಾಗೆ ನೀನು ಈ ದಿವಸದಲ್ಲಿಯೂ ನಮ್ಮನ್ನು ಸಕಲ ಪಾಪಗಳಿಂದಲೂ ಸಕಲ ಮೋಸದಿಂದಲೂ ಕಾಪಾಡ ಬೇಕೆಂದು ಬೇಡಿ ಕೊಳ್ಳುತ್ತೇವೆ. ಬೆಳಕಿನ ತಂದೆಯಾಗಿರುವ ನೀನೇ ಆತ್ಮದ ಅಂಧಕಾರವನ್ನೂ ಹೃದಯದ ಬುದ್ಧಿಹೀನತ್ವವನ್ನೂ ಬಿಡಿಸು. ನಾವು ಈ ಹೊತ್ತಾದರೂ ಯಾವ ಸಮಯದಲ್ಲಿ ಆದರೂ ಅವಿಶ್ವಾಸದಲ್ಲಿಯೂ ಮೂಢ ಭಕ್ತಿಯಲ್ಲಿಯೂ ವಿಗ್ರಹಾರಾಧನೆಯಲ್ಲಿಯೂ ಗರ್ವದಲ್ಲಿಯೂ ಬೀಳದ ಹಾಗೆ, ನಿನ್ನ ವಾಕ್ಯವನ್ನು ಉದಾಸೀನ ಮಾಡದ ಹಾಗೆ, ನಿನ್ನ ಚಿತ್ತವನ್ನೂ ನೀನು ನಮಗೆ ನೇಮಿಸಿದ ಹಿರಿಯರ ಚಿತ್ತವನ್ನೂ ಮೀರದ ಹಾಗೆ, ಕೋಪದಿಂದ ಮೋಸಗೊಳ್ಳದ ಹಾಗೆ, ನಮ್ಮನ್ನು ಕಾಪಾಡು. ವೈರತ್ವ, ಹಗೆ, ಹೊಟ್ಟೆಕಿಚ್ಚು ಮೊದಲಾದವುಗಳಲ್ಲಿಯೂ ಆಲೋಚನೆ, ಮಾತು, ಕ್ರಿಯೆಗಳ ಅಶುದ್ಧತ್ವದಲ್ಲಿಯೂ ಹೊಟ್ಟೆಬಾಕತನ, ಅಮಲು, ಮೃಗಳ್ತನದಲ್ಲಿಯೂ ಅನ್ಯಾಯ, ವಂಚನೆ, ಕಪಟಗಳಲ್ಲಿಯೂ ಬೀಳದೆ, ಹುಸಿ, ನಿಂದೆ, ಚಾಡಿಗಳನ್ನು ಹೇಳದೆ, ಕೆಟ್ಟ ದ್ರವ್ಯಾಶೆಯಿಂದಲೂ ಬೇರೆ ಯಾವ ದುರಾಶೆಯಿಂದಲೂ ಮೋಸಗೊಳ್ಳದೆ, ಸತ್ಯವಾಗಿ ನಡದು ಕೊಳ್ಳುವ ಹಾಗೆ, ನಮಗೆ ಸಹಾಯ ಮಾಡು. ನಿನ್ನ ವಿಷಯವಾಗಿಯೂ ನಿನ್ನ ನೀತಿಯ ವಿಷಯವಾಗಿಯೂ ಸತ್ಯಹಸಿವೆ ನೀರಡಿಕೆಯನ್ನು ನಮ್ಮಲ್ಲಿ ಹುಟ್ಟಿಸು. ನೀನು ಮೆಚ್ಚುವದನ್ನು ಮಾಡುವದಕ್ಕೆ ನಮಗೆ ಬೋಧಿಸು. ಯಾಕಂದರೆ ನೀನು ನಮ್ಮ ದೇವರು! ನಿನ್ನ ಆತ್ಮವು ನಮ್ಮನ್ನು ನೆಟ್ಟಗಾದ ಹಾದಿಯಲ್ಲಿ ನಡಿಸಲಿ!

ಎಲ್ಲಾದರಲ್ಲಿ ಮುಖ್ಯವಾಗಿ, ನಿತ್ಯ ಬೆಳಕಾಗಿರುವಂಥ ನಮ್ಮ ಕರ್ತನಾದ ಯೇಸು ಕ್ರಿಸ್ತನ ಕೃಪೆಯನ್ನೂ ಜ್ಞಾನವನ್ನೂ ನಮ್ಮಲ್ಲಿ ಪ್ರಕಾಶಿಸ ಮಾಡು. ನಮ್ಮ ವಿಶ್ವಾಸವೆಂಬ ದೀಪವನ್ನು

ನಮ್ಮ ಹೃದಯಗಳೊಳಗೆ ಕಾಪಾಡಿ, ಹೆಚ್ಚಿಸಿ, ಬಲಗೊಳ್ಳ ಮಾಡು. ನಮ್ಮಲ್ಲಿ ನಿನ್ನ ಪ್ರೀತಿಯನ್ನು ಹುಟ್ಟಿಸಿ, ಭರವಸವನ್ನು ಸ್ಥಾಪಿಸಿ, ಸತ್ಯವಿನಯವನ್ನೂ ಶಾಂತಿಯನ್ನೂ ಕೊಟ್ಟು, ನಾವು ನಮ್ಮ ಕರ್ತನಾದ ಯೇಸು ಕ್ರಿಸ್ತನ ಹೆಜ್ಜೆಗಳನ್ನು ಹಿಡಿದು ನಡೆಯುವ ಹಾಗೆ ಸಹಾಯ ಮಾಡಿ, ನಾವು ಯಾವ ಕೆಲಸದಲ್ಲಿದ್ದರೂ ನಿನ್ನ ಪ್ರೀತಿಯನ್ನೂ ಭಕ್ತಿಯನ್ನೂ ನಮ್ಮ ಕಣ್ಣುಗಳ ಮುಂದೆ ಇಡು.

ನಮ್ಮ ಎಲ್ಲಾ ಆಲೋಚನೆಗಳನ್ನೂ ನಮ್ಮ ಎಲ್ಲಾ ಮಾತುಗಳನ್ನೂ ನಮ್ಮ ಹೃದಯ ಬುದ್ಧಿ ಪ್ರಾಣಗಳನ್ನೂ ನಮ್ಮ ಕಿವಿ ಕಣ್ಣು ಕೈ ಕಾಲುಗಳನ್ನೂ ನಮ್ಮ ಶರೀರಗಳ ಎಲ್ಲಾ ಇಂದ್ರಿಯಗಳನ್ನೂ ಅವಯವಗಳನ್ನೂ ಇಂದು ನಿನಗೆ ಒಪ್ಪಿಸುತ್ತೇವೆ. ಅವುಗಳಲ್ಲಿ ಯಾವದಾದರೂ ಪಾಪ ಮಾಡದ ಹಾಗೆ, ಅವುಗಳನ್ನು ಕಾಪಾಡು. ನಿನ್ನ ಸೇವೆಗಾಗಿ ಅವುಗಳನ್ನು ಪರಿಶುದ್ಧ ಮಾಡು. ನಾವು ಮಾಡುವ ಕೆಲಸಗಳು ಯಾವತ್ತೂ ನಿನ್ನ ಹೆಸರಿನ ಮಾನಕ್ಕೂ ನೆರೆಯವರ ಉಪಕಾರಕ್ಕೂ ನಮ್ಮ ಆತ್ಮಗಳ ರಕ್ಷಣ್ಯಕ್ಕೂ ಉಪಯೋಗವಾಗಲಿ!

ಓ ನಂಬಿಕೆಯುಳ್ಳ ದೇವರೇ, ನಿನ್ನ ಸತ್ಯದಲ್ಲಿ ಸಂಚಾರ ಮಾಡುವ ಹಾಗೆ ನಿನ್ನ ಮಾರ್ಗವನ್ನು ನಮಗೆ ತೋರಿಸು. ನಿನ್ನ ಹೆಸರಿಗೆ ಭಯ ಪಡುವ ಹಾಗೆ ನಮ್ಮ ಹೃದಯಗಳನ್ನು ಒಂದಾಗ ಮಾಡು. ನಿನ್ನ ಪರಿಶುದ್ಧಾತ್ಮದಿಂದ ನಮ್ಮನ್ನು ತುಂಬಿಸು. ಅವನು ನಮ್ಮ ಎಲ್ಲಾ ನುಡಿನಡೆಗಳನ್ನು ಆಳಿ, ನಮ್ಮನ್ನು ನಿನ್ನ ಸಂಪೂರ್ಣ ಹೋಲ್ವಿಕೆಗೆ ಹೆಚ್ಚು ಹೆಚ್ಚಾಗಿ ಸಮಾನ ಮಾಡಲಿ! ನಮ್ಮನ್ನು ಸಂಪೂರ್ಣವಾಗಿ ಪರಿಶುದ್ಧ ಮಾಡು. ನಮ್ಮ ಪೂರ್ಣ ಆತ್ಮ ಜೀವ ಶರೀರಗಳನ್ನು ನಮ್ಮ ಕರ್ತನಾದ ಯೇಸು ಕ್ರಿಸ್ತನ ಬರುವಿಕೆಯಲ್ಲಿ ತಪ್ಪಿಲ್ಲದ ಹಾಗೆ ಕಾಪಾಡು.

ಓ ನಂಬಿಕೆಯುಳ್ಳ ದೇವರೇ, ನಿನಗೆ ನಾವು ನಮ್ಮನ್ನೂ ನಮಗೆ ಇದ್ದದ್ದೆಲ್ಲವನ್ನೂ ನಮ್ಮ ಶರೀರಾತ್ಮಗಳನ್ನೂ ನಮ್ಮ ಮಾನ ಆಸ್ತಿಯನ್ನೂ ನಮಗೆ ಪ್ರಿಯರಾದವರೆಲ್ಲರನ್ನೂ ಒಪ್ಪಿಸುತ್ತೇವೆ.

ನಿನ್ನ ಕೃಪೆಯೂ ಕರುಣೆಯೂ ಯಾವಾಗಲೂ ನಮ್ಮ ಸಂಗಡ ಇರಲಿ! ಸರ್ವಶಕ್ತನಾದ ನೀನೇ ಯಾವಾಗಲೂ ನಮಗೆ ಆಶ್ರಯವಾಗಿರು. ನಾವು ನಡದರೂ ನಿಂತರೂ ಕೂತರೂ ಮಲಗಿದರೂ ಮಾತಾಡಿದರೂ ಕೆಲಸ ಮಾಡಿದರೂ ನಿನ್ನ ಕೈ ನಮ್ಮ ಮೇಲೆ ಚಾಚು. ಗಂಡಾಂತರ ನಷ್ಟ ಆಪತ್ತುಗಳೆಲ್ಲ ಈ ಹೊತ್ತು ನಮಗೆ ದೂರವಾಗಿರಲಿ! ಶರೀರದ ಯಾವ ರೋಗಗಳಾದರೂ ಬೇನೆಗಳಾದರೂ ನಮಗೆ ಬಾರದ ಹಾಗೆ ನಮ್ಮನ್ನು ಕಾಪಾಡು. ನಾವು ನಡಿಸುವ ಉದ್ಯೋಗಗಳನ್ನು ಸಹಾ ಆಶೀರ್ವದಿಸು. ಮತ್ತು ನಿನಗೆ ಸರಿ ಬೀಳುವ ಪ್ರಕಾರ ಅನ್ನ ವಸ್ತ್ರ ಮೊದಲಾದವುಗಳನ್ನು ನಮಗೆ ದಯ ಪಾಲಿಸು. ನಿನ್ನ ದಯದಿಂದಲೇ ನಾವು ಬದುಕುತ್ತೇವೆಂದು ನಮ್ಮ ಜ್ಞಾಪಕಕ್ಕೆ ತಂದು, ನೀನು ಕೊಡುವ ದಾನಗಳನ್ನು ಪಾಪಕ್ಕಾಗಿ ಪ್ರಯೋಗಿಸದ ಹಾಗೆ ನಮ್ಮನ್ನು ಎಚ್ಚರಿಸು. ಕರ್ತನೇ, ನಮ್ಮ ಹೋಗೋಣ ಬರೋಣಗಳನ್ನು ಕಾಪಾಡು. ಆ ದುಷ್ಟ ವೈರಿಗೆ ನಮ್ಮ ಮೇಲೆ ಅಧಿಕಾರ ಇರದ ಹಾಗೆ, ನಿನ್ನ ಪರಿಶುದ್ಧ ದೂತನು ನಮ್ಮ ಸಂಗಡ ಇರಲಿ! ಸೈತಾನನಾದರೂ ದುರಾತ್ಮಗಳಾದರೂ ದುಷ್ಟ ಮನುಷ್ಯರಾದರೂ ನಮ್ಮ ಶರೀರಾತ್ಮಗಳಿಗೆ ಯಾವ ಕೇಡೂ ಮಾಡದ ಹಾಗೆ ನೀನೇ ಅವರನ್ನು ಗದರಿಸು. ಆ ವೈರಿಗಳನ್ನೆಲ್ಲಾ ನಿನ್ನ ಆತ್ಮದ ಖಡ್ಗದಿಂದಲೂ ನಿನ್ನ ಸರ್ವಶಕ್ತನದ ಬಾರುಗೋಲಿನಿಂದಲೂ ಶಿಕ್ಷಿಸು. ಸಂಹರಿಸುವ ದೂತನು ನಮ್ಮನ್ನು ಹಾದು ಹೋಗುವ ಹಾಗೆಯೂ ಯಾವ ಕೇಡಾದರೂ ನಮಗೆ ಸಮೀಪವಾಗದ ಹಾಗೆಯೂ ನೀನೇ ನಮ್ಮ ಮನೆಗಳ ಹೊಸ್ತಿಲುಗಳಿಗೂ ನಮ್ಮ ಹೃದಯದ ಬಾಗಲುಗಳಿಗೂ ಸತ್ಯವಾದ ಪಸ್ಕಗುರಿಯ ರಕ್ತವನ್ನು ಚಿಮಿಕಿಸು.

ಸರ್ವಲೋಕಕ್ಕೆ ಯಜಮಾನನೂ ಸೃಷ್ಟಿಕರ್ತನೂ ಆಗಿರುವವನೇ, ನಿನ್ನ ಪ್ರಿಯ ಮಗನಾದ ಯೇಸು ಕ್ರಿಸ್ತನಲ್ಲಿ ನಮ್ಮ ಬಡ ಮನುಷ್ಯ ಜಾತಿಗೆ, ಭೂಲೋಕವು ಉತ್ಪತ್ತಿಯಾಗುವದಕ್ಕಿಂತ ಮೊದಲೇ, ಪ್ರೀತಿ ಮಾಡಿದ್ಧೀ. ಯಾರಾದರೂ ನಾಶನವಾಗ ಬೇಕೆಂ

ದು ನಿನಗೆ ಮನಸ್ಸಿಲ್ಲವೆಂದೂ, ಎಲ್ಲರೂ ಮಾನಸಾಂತರವಾಗಿ ಬದುಕ ಬೇಕೆಂದು ಮನಸ್ಸುಂಟೆಂದೂ, ನೀನು ಹೇಳಿದ್ಧಿಯಲ್ಲ? ಅದೇ ಪ್ರಕಾರ ನೀನು ನಿತ್ಯ ಪ್ರಧಾನ ಯಾಜಕನಾಗಿರುವ ಯೇಸು ಕ್ರಿಸ್ತನ ನಿಮಿತ್ತ ಎಲ್ಲಾ ಮನುಷ್ಯರಿಗೆ ನಿನ್ನನ್ನು ಕರುಣೆಯ ತಂದೆ ಎಂದು, ಪ್ರಸಿದ್ಧಿ ಮಾಡು. ಈ ವರೆಗೆ ಮಾನಸಾಂತರವಾಗದವರೆಲ್ಲರಿಗೆ ಬೇರೆ ಮನಸ್ಸು ಕೊಡು. ಅವರನ್ನು ಮಗನ ಬಳಿಗೆ ಎಳದು, ನಿನ್ನ ಆತ್ಮದ ಮೂಲವಾಗಿ ಅವರೊಳಗೆ ಯತ್ನೈಸು. ಬಲಹೀನರೆಲ್ಲರಿಗೆ ಬಲ ಕೊಡು. ತಮ್ಮ ರಕ್ತ ಮಾಂಸದ ಸಂಗಡ ಹೋರಾಡಿ ನರಳುವವರೆಲ್ಲರಿಗೆ ಸಹಾಯ ಮಾಡು. ಶೋಧನೆಯಲ್ಲಿರುವವರನ್ನು ಆದರಿಸು. ದುಃಖ ಉಳ್ಳವರಿಗೆ ಉಪಶಮನ ಮಾಡು. ರೋಗಿಷ್ಟರಿಗೆ ಗುಣ ಮಾಡು. ಸಾಯುವವರನ್ನು ಉದ್ಧಾರ ಮಾಡು. ಗರ್ಭಿಣಿಯರಿಗೂ ಹೆರುವವರಿಗೂ ಸಹಾಯಕನಾಗು. ವಿಧವೆಯರನ್ನೂ ದಿಕ್ಕಿಲ್ಲದವರನ್ನೂ ಪರಾಮ್ಮರಿಸು. ಸರ್ವಜ್ಞಾನಿಯಾದ ನೀನು ಯಾರ ಮೇಲೆ ಹೊರೆಗಳನ್ನಿಡುತ್ತಿಯೋ, ಅವರಿಗೆ ಹೊರುವದಕ್ಕೆ ಬೇಕಾದ ತ್ರಾಣವನ್ನು ಕೊಡು. ನಿನ್ನ ಭಕ್ತರ ಮೇಲಿಗಾಗಿ ಎಲ್ಲಾ ಕೈಗೂಡಿ ಬರುವ ಹಾಗೆ ಮಾಡು. ಕಡೆಗೆ ಎಲ್ಲಾ ಶ್ರಮೆಗಳೊಳಗಿಂದ ನಮ್ಮನ್ನು ತಪ್ಪಿಸಿ ರಕ್ಷಿಸು.

ಮುಖ್ಯವಾಗಿ ನಮ್ಮ ಪ್ರಿಯ ತಂದೆ ತಾಯಿಗಳಿಗೋಸ್ಕರವೂ ಮಕ್ಕಳಿಗೋಸ್ಕರವೂ ನೆಂಟರಿಷ್ಟರಿಗೋಸ್ಕರವೂ ನಮ್ಮ ಸಂಗಡ ಅದೇ ವಿಶ್ವಾಸದಲ್ಲಿಯೂ ಪ್ರೀತಿಯಲ್ಲಿಯೂ ಐಕ್ಯವಾಗಿರುವವರೆಲ್ಲರಿಗೋಸ್ಕರವೂ ಬೇಡಿ ಕೊಳ್ಳುತ್ತೇವೆ. ನಾವು ಈಗ ಬೇಡಿಕೊಂಡ ವರಗಳನ್ನು ಅವರಿಗೂ ದಯ ಪಾಲಿಸು. ಮತ್ತು ನಾವೂ ಅವರೂ ನೀನು ಆರಿಸಿ ಕೊಂಡ ಸಮಸ್ತಸಭೆಯೂ ನಿನ್ನ ಸಂಗಡಲೂ ತಮ್ಮ ತಮ್ಮೊಳಗೂ ನಿತ್ಯವಾಗಿ ಸೌಖ್ಯವಾದ ಐಕ್ಯದಲ್ಲಿ ಇರುವ ಹಾಗೆ ದಯ ಪಾಲಿಸು. ನಮ್ಮ ಎಲ್ಲಾ ಸಭೆಯನ್ನೂ ಸಭೆಯ ಹಿರಿಯರನ್ನೂ ಬೋಧಕರನ್ನೂ ಸಹಾ ಆಶೀರ್ವದಿಸು. ಮುಖ್ಯವಾಗಿ ಚಿಕ್ಕ ಪ್ರಾಯದವರನ್ನೂ ಅವರಿಗೆ ಉಪದೇಶ ಕೊಡುವಂಥವರನ್ನೂ ಆ

ಶೀರ್ವದಿಸು. ಹಿರಿಯರಲ್ಲಿಯೂ ಕಿರಿಯರಲ್ಲಿಯೂ ನಿನಗೆ ಸಮರ್ಪಕವಾದದ್ದನ್ನು ನಡಿಸು. ಈ ದೇಶದ ಮೇಲೆ ವಿಶಿಷ್ಟ ಅಧಿಕಾರ ನಡಿಸುವವರನ್ನೂ ನ್ಯಾಯಾಧಿಪತಿಗಳನ್ನೂ ಆಶೀರ್ವದಿಸು. ಸಮಸ್ತ ದೇಶದಲ್ಲಿ ನಿನ್ನ ಹೆಸರು ದೊಡ್ಡದಾಗುವ ಹಾಗೆ ಮಾಡು. ಮತ್ತು ಈ ಲೋಕದಲ್ಲಿ ರಾಜ್ಯಭಾರ ಮಾಡುವ ಅರಸುಗಳು ನಿನ್ನ ರಾಜ್ಯದ ಅಭಿವೃದ್ಧಿಗೆ ಸಹಾಯಕರಾಗುವ ಹಾಗೆ ಮಾಡು. ಕರ್ತನೇ, ರಕ್ಷಿಸು. ಕರ್ತನೇ, ಅನುಕೂಲವನ್ನು ಕೊಡು. ನಿನ್ನ ಜನಾಂಗಕ್ಕೆ ಸಹಾಯ ಮಾಡು. ನಿನ್ನ ಸ್ವಾಸ್ಥ್ಯವನ್ನು ಆಶೀರ್ವದಿಸು. ನಿನ್ನ ಜನರನ್ನು ಮೇಯಿಸಿ, ನಿತ್ಯವಾಗಿ ಉದ್ಧಾರ ಮಾಡು. ನಿನ್ನ ರಾಜ್ಯವನ್ನು ವಿಸ್ತಾರ ಮಾಡುವ ಬಗ್ಯೆ, ನಿನ್ನ ಸಭೆಯವರು ಮಾಡುವ ಉಪಾಯಗಳನ್ನೆಲ್ಲಾ ಆಶೀರ್ವದಿಸು. ನಿನ್ನ ಪರಿಶುದ್ಧ ವಾಕ್ಯವು ಹೆಚ್ಚು ಹೆಚ್ಚಾಗಿ ವಿಸ್ತರಿಸಿ, ನಿನ್ನ ಪರಿಶುದ್ಧ ನಾಮವು ಸರ್ವ ಜನಾಂಗಗಳಲ್ಲಿ ತಿಳಿಯ ಬರುವ ಹಾಗೆ ಮಾಡು. ಈ ವಿಷಯದಲ್ಲಿ ನಿನ್ನ ಕೆಲಸವನ್ನು ನಡಿಸುವಂಥ ನಿನ್ನ ಸೇವಕರನ್ನೆಲ್ಲಾ ಕಾಪಾಡು. ಸರ್ವ ಭೂಮಿಯಲ್ಲಿರುವ ನಿನ್ನ ಮಕ್ಕಳನ್ನೆಲ್ಲಾ ಕರುಣಿಸಿ, ನಮ್ಮ ಬಿನ್ನಹಗಳನ್ನೆಲ್ಲಾ ಆಲೈಸು. ತಂದೆಯೂ ಮಗನೂ ಪರಿಶುದ್ಧಾತ್ಮವೂ ಆಗಿರುವ ಪ್ರಿಯ ನಂಬಿಗೆಯುಳ್ಳ ದೇವರೇ, ನಿನಗೆ ನಿತ್ಯವಾಗಿ ಸ್ತುತಿ ಸ್ತೋತ್ರ ಉಂಟಾಗಿರಲಿ! ಆಮೆನ್.

---

## ಸಾಯಂಕಾಲದ ಪ್ರಾರ್ಥನೆ.

ಪರಲೋಕದಲ್ಲಿರುವ ನಮ್ಮ ಪ್ರಿಯ ತಂದೆಯೇ, ಈ ದಿವಸದಲ್ಲಿ ನಮ್ಮನ್ನು ಎಲ್ಲಾ ನಷ್ಟಕ್ಕೂ ಗಂಡಾಂತರಕ್ಕೂ ಕೃಪೆಯಾಗಿ ತಪ್ಪಿಸಿ, ನಮ್ಮ ಶರೀರಗಳಿಗೂ ಆತ್ಮಗಳಿಗೂ ಬಹಳ ಉಪಕಾರ ಮಾಡಿದ್ದರಿಂದ, ನಿನ್ನ ಪ್ರಿಯ ಮಗನಾದ ಯೇಸು ಕ್ರಿಸ್ತನ ಮೂಲಕವಾಗಿ ನಿನಗೆ ಸ್ತೋತ್ರ ಮಾಡುತ್ತೇವೆ. ನಮ್ಮಂಥ ಪಾಪಿಗಳಾದ ಮನುಷ್ಯರಾಗಿರುವ ಅನೇಕರಿಗೆ ಈ ದಿವಸದಲ್ಲಿ ಶ್ರಮೆ

ಕಷ್ಟ ಸಂಕಟ ಬರಲಾಗಿ, ನಮಗಾದರೂ ಬರಲಿಲ್ಲ. ನಾವು ನಮ್ಮ ಪಾಪಗಳ ನಿಮಿತ್ತ ಅದಕ್ಕೆಲ್ಲಾ ಯೋಗ್ಯರಾಗಿರಲಾಗಿ, ಒಂದು ಕಷ್ಟವಾದರೂ ಸಂಭವಿಸಲಿಲ್ಲ. ಯಾಕಂದರೆ ನೀನು ಕೃಪೆಯಿಂದ ನಮ್ಮನ್ನು ಕಾಪಾಡಿ, ನಮ್ಮ ಯೋಗ್ಯತೆಗಿಂತ ಅಧಿಕವಾಗಿ ಆಶೀರ್ವದಿಸಿದಿ. ಆದ ಕಾರಣ ನಿನಗೆ ಸ್ತುತಿ ಸ್ತೋತ್ರ ಮಾನಾದಿ ಉಂಟಾಗಲಿ! ಸೂರ್ಯನು ಮೂಡುವ ಕಡೆಯಿಂದ ಅವನು ಮುಣುಗುವ ಕಡೆಗೂ ನಿನ್ನ ಪರಿಶುದ್ಧ ನಾಮಕ್ಕೆ ಸ್ತುತಿ ಉಂಟಾಗಲಿ!

ಹೌದು, ನನ್ನ ಆತ್ಮವೇ, ಕರ್ತನನ್ನು, ನನ್ನ ಎಲ್ಲಾ ಅಂತಃಕರಣವೇ, ಆತನ ಪರಿಶುದ್ಧ ಹೆಸರನ್ನು ಹರಸು. ನನ್ನ ಆತ್ಮವೇ, ಕರ್ತನನ್ನು ಹರಸು, ಆತನ ಉಪಕಾರಗಳನ್ನೆಲ್ಲಾ ಮರಿಯಬೇಡ. ಆತನು ನಿನ್ನ ಎಲ್ಲಾ ಅಕ್ರಮಗಳನ್ನು ಮನ್ನಿಸಿ, ನಿನ್ನ ಎಲ್ಲಾ ಅವಸ್ಥೆಗಳನ್ನು ಸ್ವಸ್ಥ ಮಾಡಿ, ನಿನ್ನ ಜೀವವನ್ನು ನಾಶನದೊಳಗಿಂದ ಬಿಡುಗಡೆ ಮಾಡಿ, ಕೃಪೆ ಕರುಣಗಳನ್ನು ನಿನಗೆ ಕಿರೀಟವಾಗಿಡುತ್ತಾನೆ. ಕರ್ತನ ಆಳಿಕೆಯ ಎಲ್ಲಾ ಸ್ಥಳಗಳಲ್ಲಿರುವ ಆತನ ಎಲ್ಲಾ ಕೃತ್ಯಗಳೇ, ಕರ್ತನನ್ನು ಹರಸಿರಿ! ನನ್ನ ಆತ್ಮವೇ, ಕರ್ತನನ್ನು ಹರಸು!

ನೀನು ಮನುಷ್ಯನನ್ನು ನೆನಸುವ ಹಾಗೆ ಅವನು ಏನು? ನೀನು ಮನುಷ್ಯನ ಮಗನನ್ನು ಪರಾಮ್ಮರಿಸುವ ಹಾಗೆ ಅವನು ಏನು? ಮನುಷ್ಯ ಏನೂ ಇಲ್ಲದವನಾಗಿದ್ದಾನೆ. ಜೀವಿಯರಲ್ಲಿ ಯಾವನಾದರೂ ನಿನ್ನ ಮುಂದೆ ನೀತಿವಂತನಾಗಿರುವದಿಲ್ಲ. ನಮ್ಮ ಸಂಗಡ ವ್ಯಾಜ್ಯವಾಡಲಿಕ್ಕೆ ನಿನಗೆ ಮನಸ್ಸಿದ್ದರೆ, ನಾವು ಸಾವಿರ ಮಾತಿಗೆ ಒಂದು ಉತ್ತರವನ್ನಾದರೂ ಕೊಡಲಾರೆವು. ಆದದರಿಂದ ನೀನು ನಮ್ಮ ಪಾಪಗಳನ್ನೆಲ್ಲಾ, ಆಲೋಚನೆಗಳಿಂದಲೂ ಮಾತುಗಳಿಂದಲೂ ಕ್ರಿಯೆಗಳಿಂದಲೂ ನಿನಗೆ ವಿರೋಧವಾಗಿ ನಡದ್ದನ್ನೆಲ್ಲಾ, ನಮಗೆ ಮನ್ನಿಸ ಬೇಕೆಂದು ನಿನ್ನನ್ನು ಬೇಡಿಕೊಳ್ಳುತ್ತೇವೆ. ಅಯ್ಯೋ! ನಾವು ಈ ಹೊತ್ತು ಮಾಡಲಿಕ್ಕೆ

ತಕ್ಕದ್ದನ್ನು ಮಾಡದೆ, ಬುದ್ಧಿಯಿಲ್ಲದ ಭಕ್ತಿಯಿಲ್ಲದ ಅನೇಕ ಕೆಟ ಕ್ರಿಯೆಗಳನ್ನೂ ಆಲೋಚನೆಗಳನ್ನೂ ಮಾಡಿದೆವು. ನಾವು ಅನೇಕ ಪ್ರಕಾರವಾಗಿ ನಿನಗೂ ನಿನ್ನ ಮಾನಕ್ಕೂ ಅಲ್ಲ, ನಮ್ಮ ಸ್ವಂತ ಇಚ್ಛೆ ಆಶೆಗಳಿಗೆ ಬದುಕಿದೆವು. ಕರ್ತನೇ, ನಮಗೆ ನ್ಯಾಯ ತೀರಿಸ ಬೇಡ, ನಮ್ಮ ಪಾಪಗಳಿಗೆ ತಕ್ಕ ಶಿಕ್ಷೆ ಮಾಡ ಬೇಡ, ನಮ್ಮ ಅಕ್ರಮಗಳಿಗೆ ತಕ್ಕ ಫಲ ಕೊಡ ಬೇಡ. ನಮ್ಮಲ್ಲಿರುವ ಪಾಪವನ್ನು ನೀನು ನೋಡಿ ವಿಚಾರಿಸಿದರೆ, ನಾವು ನಿತ್ಯ ನಾಶನಕ್ಕೂ ಆಜ್ಞೆನಿರ್ಣಯಕ್ಕೂ ಪಾತ್ರರಾಗಿದ್ಧೇವೆ. ಆದರೆ ನಿನ್ನ ಒಬ್ಬನೇ ಪ್ರಿಯ ಮಗನಾದ ಯೇಸು ಕ್ರಿಸ್ತನ ಮುಖಾಂತರವಾಗಿ ನಮ್ಮ ಮೇಲೆ ದೃಷ್ಟಿ ಇಡ ಬೇಕೆಂದು ಬೇಡಿ ಕೊಳ್ಳುತ್ತೇವೆ. ಆತನು ನಮಗೋಸ್ಕರ ಶ್ರಮೆ ಪಟ್ಟು, ಸತ್ತು, ಪ್ರಾಯಶ್ಚಿತ್ತ ಮಾಡಿದ್ಧಾನೆ. ಆತನ ನೀತಿಯೂ ಪರಿಶುದ್ಧತ್ವವೂ ನಮ್ಮದಾಯಿತು. ಆತನ ನಿಮಿತ್ತ ನಮ್ಮ ಎಲ್ಲಾ ಪಾಪಗಳನ್ನು ತೊಳದು ಬಿಟ್ಟು, ಆತನ ರಕ್ತದಲ್ಲಿ ನಮ್ಮನ್ನು ಶುದ್ಧ ಮಾಡು. ಆತನು ತನ್ನ ಪ್ರಿಯ ರಕ್ತವನ್ನು ನಮಗೋಸ್ಕರ ಕ್ರೂಜೇ ವೃಕ್ಷದಲ್ಲಿ ಚಲ್ಲಿದನಲ್ಲ? ಇದರ ಫಲ ನಮಗೂ ಉಂಟಾಗುವ ಹಾಗೆ, ಇದರ ಸಲವಾಗಿ ನಮ್ಮ ಎಲ್ಲಾ ಪಾಪಗಳ ಪರಿಹಾರವನ್ನೂ ನಿನ್ನ ಮುಂದೆ ಸಮರ್ಪಕವಾದಂಥಾ ಸಂಪೂರ್ಣನೀತಿಯನ್ನೂ ನಮಗೆ ದಯ ಪಾಲಿಸು.

ಓ ಪ್ರಿಯ ದೇವರೇ, ನಿನ್ನ ಪರಿಶುದ್ಧಾತ್ಮದ ಮೂಲವಾಗಿ ನಮಗೆ ಬೆಳಕನ್ನೂ ಪರಿಶುದ್ಧತ್ವವನ್ನೂ ಕೊಡು. ಆತನು ನಮ್ಮನ್ನು ಪಾಪಸ್ಥಿತಿಯೊಳಗಿಂದ ಹೊರಡಿಸಿ, ನಿನ್ನ ಮಗನ ನೀತಿಯಿಂದ ಹೊಸಬರನ್ನು ಮಾಡಲಿ! ಈ ರಾತ್ರಿಯಲ್ಲಿಯೂ ನಮಗೆ ಪಾಪವೂ ಕೇಡೂ ನಾಚಿಗೆಯೂ ಯಾವತ್ತೂ ಬಾರದ ಹಾಗೆಯೂ, ನಮ್ಮ ನಡತೆ ಎಲ್ಲಾ ನಿನಗೆ ಸಮರ್ಪಕವಾಗುವ ಹಾಗೆಯೂ, ನಮ್ಮನ್ನು ಕಾಪಾಡು. ಕರ್ತನಾದ ದೇವರೇ, ನಮ್ಮ ಜೀವದ ತಂದೆಯೂ ಒಡೆಯನೂ ಆಗಿರುವಾತನೇ, ಎಲ್ಲಾ ದುರಾಶೆಗಳನ್ನು ನಮ್ಮಿಂದ ತೊಲಗಿಸು. ನಾವು ಅಶುದ್ಧತ್ವದ ಪಾಪ

ಗಳಲ್ಲಿ ಬೀಳದ ಹಾಗೆಯೂ, ನಮ್ಮ ಹೃದಯಗಳು ನಾಚಿಕೆಯನ್ನು ಬಿಡದ ಹಾಗೆಯೂ, ನಮ್ಮನ್ನು ಕಾಪಾಡು. ಭಕ್ತಿ ಇಲ್ಲದ ವ್ಯರ್ಥವಾದ ಎಲ್ಲಾ ಆಲೋಚನೆಗಳನ್ನೂ ಪಾಪಮಯವಾದ ಕನಸುಗಳನ್ನೂ ನಮಗೆ ದೂರ ಮಾಡು. ನಮ್ಮ ಎಲ್ಲಾ ಅವಯವಗಳನ್ನೂ ಇಂದ್ರಿಯಗಳನ್ನೂ ಶಿಕ್ಷಿಸಿ, ಪರಿಶುದ್ಧ ಮಾಡು. ಈ ರಾತ್ರಿಯಲ್ಲಿ ನಮ್ಮ ಪಾಪಗಳನ್ನೆಲ್ಲಾ ತೊಲಗಿಸಿ, ನಾಳೆ ಏಳುವಾಗ ಹೊಸ ಭಕ್ತಿಯೂ ಪರಿಶುದ್ಧತ್ವವೂ ನಮ್ಮಲ್ಲಿ ಉಂಟಾಗುವ ಹಾಗೆ ಮಾಡು. ನಮ್ಮ ನಿದ್ರೆಯು ಪಾಪಮಯವಾದದ್ದಲ್ಲ ಪರಿಶುದ್ಧವಾದದ್ದು ಆಗಿರಲಿ! ನಮ್ಮ ಆತ್ಮವೂ ಪ್ರಾಣವೂ ನಿನ್ನ ಕಡೆಗೆ ಎಚ್ಚರವಾಗಿದ್ದು, ನಿನ್ನ ಸಂಗಡ ಮಾತಾಡಿ, ಕಾರ್ಯವನ್ನು ನಡಿಸಲಿ! ನಾವು ನಿದ್ದೆ ಮಾಡಿದರೂ ಎಚ್ಚರಿಕೆಯಾಗಿದ್ದರೂ ನಿನ್ನ ನಾಮವೂ ನಿನ್ನ ಜ್ಞಾಪಕವೂ ಯಾವಾಗಲೂ ನಮ್ಮ ಹೃದಯದಲ್ಲಿ ನೆಲೆಯಾಗಿರಲಿ! ನಂಬಿಗೆಯುಳ್ಳ ಪ್ರಿಯ ದೇವರೇ, ನಮ್ಮ ಬಳಿಗೆ ಬಂದು, ರಕ್ಷಣ್ಯಾಕರವಾದ ನಿನ್ನ ಐಕ್ಯದಲ್ಲಿ ನಮ್ಮನ್ನು ಹೆಚ್ಚು ಹೆಚ್ಚಾಗಿ ಸ್ಥಾಪಿಸು.

ದೇವರೇ, ನಿನಗೆ ನಮ್ಮ ಶರೀರಗಳನ್ನೂ ಆತ್ಮಗಳನ್ನೂ ಒಪ್ಪಿಸುತ್ತೇವೆ: ನೀನೇ ನಮಗೆ ಆಶ್ರಯವಾಗಿದ್ದು ನಮ್ಮನ್ನು ಆಶೀರ್ವದಿಸ ಬೇಕೆಂದು, ಬೇಡಿ ಕೊಳ್ಳುತ್ತೇವೆ. ನೀನೇ ನಮ್ಮನ್ನು ಕಾಯಿ. ನಿನ್ನ ರೆಕ್ಕೆಗಳ ನೆರಳಿನಲ್ಲಿ ನಮಗೆ ಕ್ಷೇಮವುಳ್ಳ ನಿದ್ರೆಯನ್ನು ಕೊಡು. ಭಗ್ಗನೆ ಬರುವ ಅಂಜಿಕೆಗೂ ದುಷ್ಟರ ಬಿರುಘಾಳಿಗೂ ನಾವು ಭಯಪಡದ ಹಾಗೆ ನಮಗೆ ದಯ ಮಾಡು. ಎಲ್ಲಾ ವೈರಿಗಳನ್ನೂ ಕಳ್ಳರನ್ನೂ ನಮಗೆ ದೂರ ಮಾಡಿ, ನಮ್ಮ ಮನೆಗಳನ್ನು ಭದ್ರವಾಗಿಡು. ನಮಗೆ ಯಾವ ರೋಗವಾದರೂ ಭಯವಾದರೂ ನಷ್ಟವಾದರೂ ಆಗದ ಹಾಗೆಯೂ, ನಮ್ಮ ಮನೆಗಳಿಗೆ ಬೆಂಕಿಯಿಂದಾಗಲಿ ನೀರಿನಿಂದಾಗಲಿ ಮೋಸವಾಗದ ಹಾಗೆಯೂ, ನಮ್ಮನ್ನು ಕಾಪಾಡು. ಇಗೋ, ನಮ್ಮನ್ನು ಕಾಪಾಡುವವನು ತೂಗಡಿಸುವದಿಲ್ಲ! ಇಗೋ, ಇಸ್ರಯೇಲನ್ನು ಕಾಯುವವನು ತೂಗಡಿಸದೆ, ನಿದ್ದೆ ಮಾಡದೆ, ಇದ್ದಾನೆ! ದೇವರೇ, ನೀನು ನಮ್ಮ ಬಲಗೈಯ ನೆರಳಾ

ಗಿರು. ನಿನ್ನ ಪರಿಶುದ್ಧ ಕಾವಲಿಗಾರರು ನಮ್ಮನ್ನು ಕಾಯಲಿ! ನಿನ್ನ ದೂತರು ನಮ್ಮ ಸುತ್ತಲಾಗಿ ಉಳು ಕೊಂಡು, ಆ ದುಷ್ಟ ವೈರಿ ನಮ್ಮ ಮೇಲೆ ಅಧಿಕಾರ ಹೊಂದದ ಹಾಗೆ ನಮಗೆ ಸಹಾಯ ಮಾಡಲಿ! ಸೈತಾನನೂ ಎಲ್ಲಾ ದುರಾತ್ಮಗಳೂ ದುಷ್ಟ ಮನುಷ್ಯರೂ ನಮ್ಮ ಶರೀರಾತ್ಮಗಳಿಗೆ ನಷ್ಟ ಮಾಡದ ಹಾಗೆ ಅಡ್ಡಿ ಮಾಡು. ನಿನ್ನ ಸರ್ವತ್ರಾಣವೇ ನಮ್ಮ ಎಲ್ಲಾ ಶತ್ರುಗಳಿಗೆ ನಮ್ಮನ್ನು ತಪ್ಪಿಸುವಂಥ ಡಾಲಾಗಿರಲಿ! ನಿನ್ನ ಪ್ರಿಯ ಮಗನ ಪರಿಶುದ್ಧ ಘಾಯಗಳು ನಮ್ಮ ಆಶ್ರಯವಾಗಿರಲಿ! ನಾಳೆ ದಿವಸದಲ್ಲಿ ನಾವು ಸಂತೋಷವಾಗಿ ಏಳುವ ಹಾಗೆ, ತಕ್ಕ ಕಾಲದಲ್ಲಿ ನಮ್ಮನ್ನು ಎಚ್ಚರಿಸು.

ನಮ್ಮ ತಂದೆ ತಾಯಿಗಳನ್ನೂ ಸಹೋದರರನ್ನೂ ಮಕ್ಕಳನ್ನೂ ಇಷ್ಟರನ್ನೂ ಆಶೀರ್ವದಿಸು. ಅವರನ್ನು ಕಾಪಾಡಿ, ಅವರಿಗೆ ಸಹಾಯ ಮಾಡು. ಈ ಊರಿನಲ್ಲಿಯೂ ಈ ದೇಶದಲ್ಲಿಯೂ ಇರುವ ಜನರನ್ನೆಲ್ಲಾ ಕಾಪಾಡು. ಎಲ್ಲಾ ಮೋಸಗಳನ್ನು ನಮ್ಮ ಮನೆಗಳಿಗೆ ದೂರ ಮಾಡು. ರೋಗಿಷ್ಠರಾಗಲಿ ಸ್ವಸ್ಥವಾದವರಾಗಲಿ ಸಂತೋಷವುಳ್ಳವರಾಗಲಿ ದುಃಖವುಳ್ಳವರಾಗಲಿ ಹಿರಿಯರಾಗಲಿ ಕಿರಿಯರಾಗಲಿ ಐಶ್ವರ್ಯವಂತರಾಗಲಿ ಬಡವರಾಗಲಿ ದೊಡ್ಡವರಾಗಲಿ ಸಣ್ಣವರಾಗಲಿ ಎಲ್ಲರ ಮೇಲೆ ಕೃಪೆಯುಳ್ಳವನಾಗಿರು. ಎಲ್ಲರಲ್ಲಿ ನಿನ್ನ ಸಹಾಯವನ್ನೂ ಕರುಣೆಯನ್ನೂ ಐಶ್ವರ್ಯವಾಗಿ ಪ್ರಸಿದ್ಧಿ ಮಾಡಿ, ನೀನೇ ಸಹಾಯ ಮಾಡುವ ದೇವರೂ ಸತ್ತವರೊಳಗಿಂದ ರಕ್ಷಿಸುವ ಕರ್ತರ ಕರ್ತನೂ ಆಗಿದ್ಧಿ ಎಂದು, ಪ್ರಸಿದ್ಧಿ ಮಾಡು.

ಓ ತ್ರಿಯೇಕನಾದ ದೇವರೇ, ತಂದೆಯೇ, ಮಗನೇ, ಪರಿಶುದ್ಧಾತ್ಮವೇ, ನಮ್ಮನ್ನು ಐಶ್ವರ್ಯವಾಗಿ ಆಶೀರ್ವದಿಸಿ, ನಮ್ಮ ಸಂಗಡ ಇರು. ಮತ್ತು ನಾವು ಸಾಯುವದಕ್ಕೆ ಸಮಯ ಬಂದರೆ, ಸದಾಕಾಲದಲ್ಲಿ ನಮ್ಮ ಒಂದೇ ಆಶೆಯಾಗಿರುವ ನೀನೇ ನಿನ್ನಲ್ಲಿ ನಮಗೆ ಸೌಖ್ಯವಾದ ವಿಶ್ರಾಂತಿಯನ್ನು ದಯ ಪಾಲಿಸು! ಆಮೆನ್.



# ಮೊದಲನೇ ವಾರದ

# ಪ್ರಾರ್ಥನೆಗಳು.

## ಆದಿತ್ಯವಾರದ ಮುಂಜಾನೆ.

ಕರ್ತನಾದ ಯೇಸು ಕ್ರಿಸ್ತನೇ, ನಿನ್ನ ಕೃಪೆಯಿಂದ ನಾವು ಒಂದು ಹೊಸ ವಾರದ ಆರಂಭದಲ್ಲಿ ಶೇರಿ, ನಮ್ಮ ಶರೀರಾತ್ಮಗಳ ವಿಶ್ರಾಂತಿಗಾಗಿ ನೇಮಿಸಿರುವ ದಿವಸವನ್ನು ತಿರಿಗಿ ನೋಡುತ್ತೇವೆ. ಆದರೆ ಆತ್ಮದ ವಿಶ್ರಾಂತಿಯು ನಿನ್ನ ಹೊರ್ತು ಮತ್ತೆಲ್ಲಿ ನಮಗೆ ಶಿಕ್ಕೀತು? ನಿನ್ನನ್ನು ನಿನ್ನ ವಾಕ್ಯದ ಹೊರ್ತು ಮತ್ತೆಲ್ಲಿ ಕಂಡು ಕೊಂಡೇವು? ಹೀಗಿರುವದರಿಂದ ಈ ಹೊತ್ತು ನಿನ್ನ ವಾಕ್ಯದಿಂದ ನೀನೇ ನಮಗೆ ಉಪದೇಶ ಮಾಡು. ನೀನು ಸತ್ಯವಂತನೂ ಜೀವ ಉಳ್ಳವನೂ ಮನುಷ್ಯರ ಬೆಳಕೂ ಜೀವವೂ ಆಗಿರುತ್ತಿ ಎಂದು, ನಾವು ನಿನ್ನ ವಾಕ್ಯದಿಂದ ಹೊಸದಾಗಿ ತಿಳುಕೊಳ್ಳುವ ಹಾಗೆ ನಮಗೆ ಸಹಾಯ ಮಾಡು. ನಮ್ಮ ಆತ್ಮಗಳು ಸ್ವಸ್ಥವಾಗಿ ಬದುಕುವ ಹಾಗೆ ನಿನ್ನ ವಾಕ್ಯವನ್ನು ನಮಗೆ ಜೀವದ ಆಹಾರವಾಗಿ ಕೊಟ್ಟು, ನಮಗೆ ಬೇಕಾದ ಶಿಕ್ಷೆ ಉಪಶಮನ ಉಪದೇಶಗಳನ್ನು ದಯ ಮಾಡು. ತಿಳಿಯದೆ ಪಾಪಗಳಲ್ಲಿ ನಡಕೊಂಡು ನಮ್ಮನ್ನು ನಾವೇ ಮೋಸಗೊಳಿಸದ ಹಾಗೆ ನಮ್ಮನ್ನು ಎಚ್ಚರಿಸಿ, ನಿನ್ನ ಸತ್ಯ ವಾಕ್ಯದ ಮೂಲವಾಗಿ, ಸತ್ಯ ವಿನಯವನ್ನೂ ಮುರಿದ ಹೃದಯವನ್ನೂ ಸತ್ಯ ವಿಶ್ವಾಸವನ್ನೂ ಹುಟ್ಟಿಸಿ, ನಿನ್ನ ನೀತಿಯಿಂದ ನಮ್ಮನ್ನು ನೀತಿವಂತರಾಗಿರಲೀಸು. ನಿನ್ನ ವಾಕ್ಯದ ಪ್ರಕಾರ ನಮಗೆ ನ್ಯಾಯ ತೀರಿಸುವ ದಿವಸದಲ್ಲಿ ನಾವು ನೀತಿವಂತರೆಂಬ ನಿರ್ಣಯವನ್ನು ಹೊಂದುವ ಹಾಗೆ ನಿನ್ನ ವಾಕ್ಯದಿಂದ ನಮ್ಮಲ್ಲಿ ಯತ್ನೈಸು. ಇದಲ್ಲದೆ ತ್ರಾಣವಿಲ್ಲದ ಸುಳ್ಳಾದ ಅನ್ಯಬೋಧನೆಯಿಂದಲೂ ಜ್ಞಾನದ ಗರ್ವದಿಂದಲೂ ದು

ರಾತ್ಮಗಳ ಮೋಸದಿಂದಾಗುವ ಭ್ರಮೆಯಿಂದಲೂ ನಾವು ಕೆಟ್ಟು ಹೋಗದ ಹಾಗೆ ನಮ್ಮನ್ನು ಕಾಪಾಡು. ಸತ್ಯವಾಗಿರುವ ನೀನೇ ನಮಗೆ ಉಪದೇಶ ಮಾಡು. ಉತ್ತಮ ಕುರುಬನಾದ ನೀನೇ ನಮ್ಮನ್ನು ನಡಿಸು. ನಿನ್ನನ್ನು ತಗ್ಗಿಸಿ ಕೊಂಡು ಬಡವರಿಗೆ ಪ್ರೀತಿ ಮಾಡುವವನೇ, ನಮ್ಮನ್ನು ಪರಾಮರಿಸು. ಈ ವಾರದ ಆರಂಭದಲ್ಲಿ ನಾವು, ಹೊಸದಾಗಿ ಹಗುರವಾದ ನಿನ್ನ ನೊಗವನ್ನು ಹೊರ ಬೇಕೆಂದು, ನಿಶ್ಚೈಸಿ ಕೊಂಡು, ನಿನಗೆ ವಿರೋಧವಾದ ಮನಸ್ಸನ್ನೆಲ್ಲಾ ನಮ್ಮೊಳಗಿಂದ ತೆಗದು ಹಾಕಿ ನಾಶನ ಮಾಡ ಬೇಕೆಂದು, ನಿನ್ನನ್ನು ಬೇಡಿ ಕೊಳ್ಳುತ್ತೇವೆ. ಈ ಹೊತ್ತು ನಿನ್ನ ವಾಕ್ಯವನ್ನು ಸಾರಿ ಹೇಳ ತಕ್ಕ ನಿನ್ನ ಸೇವಕರಿಗೆ ಕೃಪೆಯಾಗಿದ್ದು, ಕೇಳುವವರ ಉಪಯೋಗಕ್ಕೆ ಬೇಕಾದ ಮಾತುಗಳನ್ನು ಅವರು ಆಡುವ ಹಾಗೆ ಅವರ ಹೃದಯಗಳನ್ನು ಪ್ರೇರೇಪಿಸು. ಕೇಳುವವರ ಹೃದಯಗಳನ್ನು ಸಿದ್ಧ ಮಾಡಿ, ನಿನ್ನ ವಾಕ್ಯವು ಅವರಿಗೆ ತಗಲಿ ಫಲ ಫಲಿಸುವ ಹಾಗೆ ಅವರ ಬುದ್ಧಿಗಳನ್ನು ತೆರೆ. ತಮ್ಮ ಆತ್ಮಗಳ ರಕ್ಷಣ್ಯವನ್ನು ಪಡಕೊಳ್ಳ ಬೇಕಾಗಿ ಈ ಹೊತ್ತು ನಿನಗೆ ಮೊರೆ ಇಡುವ ಸಭೆಯವರೆಲ್ಲರನ್ನು ಆಶೀರ್ವದಿಸು. ಮತ್ತು ಇಬ್ಬರಾದರೂ ಮೂವರಾದರೂ ನಿನ್ನ ಹೆಸರಿನಲ್ಲಿ ಎಲ್ಲಿ ಕೂಡಿರುತ್ತಾರೋ, ಅಲ್ಲೇ ನೀನು ಅವರ ಮಧ್ಯದಲ್ಲಿ ಇರು! ಆಮೆನ್.

---

## ಆದಿತ್ಯವಾರದ ಸಂಜೆಗೆ.

ಪರಲೋಕದಲ್ಲಿರುವ ಕೃಪೆಯುಳ್ಳ ತಂದೆಯೇ, ನೀನು ಪೂರ್ವದಲ್ಲಿ ಅನೇಕ ಸಾರಿಯೂ ಅನೇಕ ವಿಧವಾಗಿಯೂ ಪಿತೃಗಳ ಸಂಗಡ ಪ್ರವಾದಿಗಳ ಮುಖಾಂತರವಾಗಿ ಮಾತಾಡಿ, ಕಡೇ ದಿವಸಗಳಲ್ಲಿ ಮನುಷ್ಯರ ಸಂಗಡ ನಿನ್ನ ಮಗನ ಮುಖಾಂತರ ಮಾತಾಡಿದಕ್ಕೂ—ತರುವಾಯ ಈತನು ತನ್ನ ಅಪೊಸ್ತಲರಿಗೆ ಸುವಾ

ರ್ತೆಯನ್ನು ಎಲ್ಲಾ ಸೃಷ್ಟಿಗೆ ಸಾರಿ ಹೇಳ ಬೇಕೆಂಬ ಆಜ್ಞೆ ಕೊಟ್ಟು, ಪರಿಶುದ್ಧಾತ್ಮದ ವರಗಳನ್ನು ಅವರಿಗೆ ಐಶ್ವರ್ಯವಾಗಿ ದಯ ಪಾಲಿಸಿದ್ದಕ್ಕೂ—ನಿನಗೆ ಸ್ತೋತ್ರ ಮಾಡುತ್ತೇವೆ. ಈ ಹೊತ್ತು ಸಹಾ ನಿನ್ನ ಸತ್ಯವಾದ, ಸ್ಪಷ್ಟವಾದ, ಬಲವಾದ, ರಕ್ಷಣ್ಯಕರವಾದ ವಾಕ್ಯವನ್ನು ಓದಿ, ಕೇಳಿ, ಧ್ಯಾನಿಸುವದಕ್ಕೆ ನೀನು ನಮಗೆ ಅಪ್ಪಣೆ ಕೊಟ್ಟ ಕಾರಣ ಸ್ತೋತ್ರ ಮಾಡುತ್ತೇವೆ. ನಾವು ಮುಂಚೆ ಈ ವಾಕ್ಯಕ್ಕೆ ಪ್ರೀತಿ ಮಾಡದೆ, ನಮ್ಮ ಸ್ವಂತ ಇಚ್ಛೆ ಆಶೆಗಳ ಪ್ರಕಾರವೂ ಈ ಲೋಕದ ಮರ್ಯಾದೆಯ ಪ್ರಕಾರವೂ ಸೈತಾನನ ಮೋಸಗಳಿಗೆ ಇಂಬು ಕೊಟ್ಟೆವೆಂಬ ಪಾಪವನ್ನು ಮನ್ನಿಸು. ನಾವು ಈ ದಿವಸದಲ್ಲಿ ನಿನ್ನ ಪ್ರಿಯ ವಾಕ್ಯದ ಮೇಲೆ ತಕ್ಕಷ್ಟು ಎಚ್ಚರಿಕೆ ಮಾಡಲಿಲ್ಲವೆಂದೂ, ಅನೇಕ ವ್ಯರ್ಥ ಆಲೋಚನೆಗಳಲ್ಲಿಯೂ ಮಾತುಗಳಲ್ಲಿಯೂ ಶೇರಿ ಮೋಸ ಹೋದೆವೆಂದೂ ನೆನಸಿ, ದುಃಖ ಪಡುತ್ತೇವೆ. ಪ್ರಿಯ ತಂದೆಯೇ, ನೀನು ನಿನ್ನ ವಾಕ್ಯವನ್ನು ನಮ್ಮಿಂದ ತೆಗಿಯುವದಕ್ಕೆ ನಾವು ನಮ್ಮ ಪಾಪದ ಸಲವಾಗಿ ಪಾತ್ರರಾದೆವು. ಆದರೆ ನೀನು ಕರುಣೆ ಮಾಡಿ, ಅದನ್ನು ನಮ್ಮಿಂದ ತೆಗಿಯ ಬೇಡ. ಇನ್ನು ಮುಂದೆ ಅದರ ಮೂಲವಾಗಿ ನಮಗೆ ಉಪದೇಶ ಕೊಟ್ಟು, ನಿತ್ಯಜೀವಕ್ಕಾಗಿ ನಮ್ಮನ್ನು ಸಿದ್ಧ ಮಾಡು. ನಿನ್ನ ಕೃಪೆ ಅಧಿಕವಾದದ್ದು; ನಿನ್ನ ತ್ರಾಣವು ಎಲ್ಲಾನ್ನು ಮೀರುವಂಥಾದ್ದು. ನೀನು ಕ್ಷಣ ಮಾತ್ರದಲ್ಲಿ ಹಳೇದನ್ನೆಲ್ಲಾ ಹೊಸದು ಮಾಡ ಬಲ್ಲಿ. ಆದದರಿಂದ ನಾವು ಪಾಪದ ಸೇವೆಯಲ್ಲಿ ಕಳದ ವರುಷಗಳ ನಷ್ಟವನ್ನು ಪರಿಹರಿಸಿ, ನಾವು ಈಗಲಾದರೂ ಒಳ್ಳೇ ಫಲವನ್ನು ಫಲಿಸುವ ಹಾಗೆಯೂ ನಿನ್ನ ಪರಲೋಕರಾಜ್ಯದಲ್ಲಿ ಐಶ್ವರ್ಯವಾಗಿ ಪ್ರವೇಶಿಸುವ ಹಾಗೆಯೂ ಮೇಲಿರುವ ನಮ್ಮ ಸ್ವಂತ ದೇಶದಲ್ಲಿ ನಮಗೆ ಸಿದ್ಧವಾಗಿರುವ ದೊಡ್ಡ ಬಾಧ್ಯತೆಯನ್ನು ನಿನ್ನ ಮಹಿಮೆಗಾಗಿ ಪಡಕೊಳ್ಳುವ ಹಾಗೆಯೂ ನಮಗೆ ಸಹಾಯ ಮಾಡು. ಈ ರಾತ್ರಿಯಲ್ಲಿಯೂ ನಮ್ಮ ಶರೀರಾತ್ಮಗಳನ್ನೂ ನಮಗಿದ್ದದೆಲ್ಲಾನ್ನೂ ಭದ್ರವಾದ ನಿನ್ನ ಆಶ್ರಯದೊಳಗಿಟ್ಟು, ಕ

ಷ್ಟದಲ್ಲಿರುವವರೆಲ್ಲರಿಗೆ ಉಪಶಮನವನ್ನೂ ಸಹಾಯವನ್ನೂ ದಯ ಪಾಲಿಸು! ಆಮೆನ್.

---

## ಸೋಮವಾರದ ಮುಂಜಾನೆ.

ಪ್ರಿಯ ರಕ್ಷಕನಾದ ಯೇಸು ಕ್ರಿಸ್ತನೇ! ನೀನು ಶ್ರಮೆ ಪಡುವದಕ್ಕಿಂತ ಮುಂಚೆ, ಪರಲೋಕದಲ್ಲಿರುವ ನಿನ್ನ ತಂದೆಗೆ ಹೇಳಿದಿಯಲ್ಲ—ನಾನು ಇನ್ನು ಮುಂದೆ ಈ ಲೋಕದಲ್ಲಿ ಇರುವದಿಲ್ಲ, ಆದರೆ ನನ್ನ ಶಿಷ್ಯರು ಈ ಲೋಕದಲ್ಲಿರುತ್ತಾರೆ, ಹೀಗಿರಲಾಗಿ ನಾನು ನಿನ್ನ ಬಳಿಗೆ ಬರುತ್ತೇನೆ.—ಈ ನಿನ್ನ ವಾಕ್ಯವು ನಮಗೋಸ್ಕರ ಹೇಳಿಯದೆ. ನಾವು ಇನ್ನೂ ಈ ಲೋಕದಲ್ಲಿ ಇರುತ್ತೇವೆ. ಆದರೆ ಈ ಲೋಕವೆಂಥಾದ್ದೆಂದು ನಿನಗೆ ಚಂದಾಗಿ ತಿಳದದೆ. ನೀನು ಮೂವತ್ತಮೂರು ವರ್ಷ ಈ ಲೋಕದಲ್ಲಿದ್ದು, ಎಲ್ಲಾ ಪ್ರಕಾರದ ಶೋಧನೆಗಳನ್ನು ತಾಳಿದಿ; ಪಾಪದಲ್ಲಿ ಮಾತ್ರ ನೀನು ಬೀಳಲಿಲ್ಲ. ಆದರೆ ಈಗ ನೀನು ಈ ಲೋಕವನ್ನು ಬಿಟ್ಟು, ಎಲ್ಲಾ ಶೋಧನೆಗಳನ್ನು ಜೈಸಿ, ತಂದೆಯ ಐಕ್ಯದಲ್ಲಿ ಶೇರಿ, ಆತನ ಬಲಪಾರ್ಶ್ವದಲ್ಲಿ ಆತನ ಸಿಂಹಾಸನದ ಮೇಲೆ ಕೂತು ಕೊಂಡವನಾಗಿದ್ದೀ. ನೀನು ಕರುಣೆಯೂ ನಂಬಿಕೆಯೂ ಉಳ್ಳ ಪ್ರಧಾನ ಯಾಜಕನಾಗಿ, ಈ ಲೋಕದೊಳಗೆ ಶೋಧನೆ ತಾಳುವವರನ್ನು ಕನಿಕರಿಸ ಬಲ್ಲವನಾಗಿರುವದರಿಂದ ನೀನು ನಮಗೆ ದಿನಾಲು ಈ ಲೋಕದ ಮೇಲೆ ಜಯವನ್ನು ಕೊಟ್ಟು, ದಿನಾಲು ನಮ್ಮನ್ನು ಎಲ್ಲಾ ಕೇಡಿಗೆ ತಪ್ಪಿಸಿ, ಈ ಲೋಕದಲ್ಲಿ ನಮಗೆ ಸಂಭವಿಸುವದೆಲ್ಲಾ ನಮ್ಮ ಉಪಕಾರಕ್ಕಾಗಿ ಸಹಾಯ ಮಾಡುವ ಹಾಗೆ ದಯ ಪಾಲಿಸ ಬೇಕೆಂದು ಬೇಡಿ ಕೊಳ್ಳುತ್ತೇವೆ. ಈ ಲೋಕವು ಎಷ್ಟೋ ಅಂಧಕಾರ ದುಃಖ ಅಶುದ್ಧತ್ವಗಳಿಂದ ತುಂಬಿಯದೆ! ಅದರೊಳಗೆ ಸೈತಾನನಿಗೆ ಎಷ್ಟೋ ಅಧಿಕಾರ ಉಂಟು! ಸ್ವಲ್ಪ ಕಡಿಮೆ ಎಲ್ಲರೂ ದೃಶ್ಯವಾದ ಕಾರ್ಯಗಳನ್ನು ನೋಡುತ್ತಾರಲ್ಲ? ಕೃಪೆಯ ಸಮಯವ

ನ್ನೂ ಕೃಪೆಯನ್ನೂ ದೊರಕಿಸಿ ಕೊಳ್ಳುವ ಹಾಗೆ ನೀನು ನೇಮಿಸಿದ ಉಪಾಯಗಳನ್ನು ಲಕ್ಷಿಸದೆ ಇರುತ್ತಾರೆ. ಕರ್ತನಾದ ಯೇಸುವೇ, ನಿನ್ನ ಹೆಸರನ್ನೂ ನಿನ್ನ ಪರಲೋಕದ ರಾಜ್ಯವನ್ನೂ ಉದಾಸೀನ ಮಾಡುತ್ತಾರೆ. ಹೀಗಿರುವದರಿಂದ ನಾವು ಈ ಹೊತ್ತು ಪ್ರಪಂಚದ ಮಾರ್ಗದಲ್ಲಿ ಶೇರದೆ, ಪ್ರಪಂಚದವರ ಮನಸ್ಸನ್ನು ಧರಿಸಿ ಕೊಳ್ಳದೆ, ಅವರಂತೆ ನಡಕೊಳ್ಳದೆ, ನಿನ್ನಲ್ಲಿ ಸತ್ಯ ವಿಶ್ವಾಸವಿಟ್ಟು, ನಿನಗೂ ನಿನ್ನ ಮಕ್ಕಳಿಗೂ ಸತ್ಯ ಪ್ರೀತಿ ಮಾಡಿ, ಪರಿಶುದ್ಧವಾಗಿ ಸಂಚರಿಸುವ ಹಾಗೆ, ನಮ್ಮನ್ನು ಕಾಪಾಡು. ಕರ್ತನಾದ ಯೇಸುವೇ, ನಾವು ನಿನ್ನವರಾಗಿದ್ಧೇವೆ. ನಿನಗಾಗಿ ಬದುಕಿ, ಶ್ರಮೆ ಪಟ್ಟು, ಸಾಯುತ್ತೇವೆ. ನೀನು ಈ ವರೆಗೂ ಅನೇಕ ಮಕ್ಕಳನ್ನು ಮಹಿಮೆಯೊಳಗೆ ಶೇರಿಸಿದ ಪ್ರಕಾರವೇ ನಮ್ಮನ್ನು ಸಹ ಗಂಡಾಂತರವಾದ ಈ ಲೋಕವನ್ನು ದಾಟಿಸಿ, ಅಂತ್ಯದಲ್ಲಿ ನಮಗೋಸ್ಕರ ಸಿದ್ಧವಾಗಿರುವ ಮಹಿಮೆಯಲ್ಲಿ ಶೇರಿಸು! ಆಮೆನ್.

---

## ಸೋಮವಾರದ ಸಂಜೆಗೆ.

ಕರ್ತನಾದ ಯೇಸುವೇ, ಈ ದಿವಸದಲ್ಲಿ ನಮಗೆ ಯಾವದೊಂದೂ ಮೋಸವು ಆಗದ ಹಾಗೆ ನಮ್ಮನ್ನು ಕಾಪಾಡಿ, ಅನೇಕ ಪ್ರಕಾರವಾಗಿ ನಮಗೆ ಉಪಕಾರ ಮಾಡಿದ ಕಾರಣ, ನಿನಗೆ ಈ ಸಾಯಂಕಾಲದಲ್ಲಿ ಸ್ತೋತ್ರ ಮಾಡುತ್ತೇವೆ. ಈ ಹಗಲು ಈಗ ತೀರಿತು. ಅದು ತಿರಿಗಿ ಬರುವದಿಲ್ಲ. ಈ ಹಗಲ ಕಷ್ಟಗಳೆಲ್ಲಾ ಮುಗಿದವು; ಆದರೆ ನಾವು ನಮ್ಮ ಅಂತ್ಯಕಾಲಕ್ಕೆ ಹೆಚ್ಚಾಗಿ ಸಮಿಾಪವಾದೆವು. ನೀನಾದರೆ, ಕರ್ತನಾದ ಯೇಸುವೇ, ಇದ್ದ ಹಾಗೇ ಇರುತ್ತಿ. ನಿನ್ನ ವರ್ಷಗಳಿಗೆ ಅಂತ್ಯವಿಲ್ಲಾ. ನೀನು ನಿನ್ನೆಯೂ ಈ ಹೊತ್ತೂ ಯಾವಾಗಲೂ ಒಂದೇ ಪ್ರಕಾರವಾಗಿದ್ಧಿ. ನಾವು ಲಯವಾಗುವ ಮನುಷ್ಯರು. ನಮ್ಮ ಸಮಯವು ಶ್ರಮೆಗಳಲ್ಲಿ ಬೇಗ ಕಳದು ಹೋಗುತ್ತದೆ. ನಮ್ಮ ಹೃದಯಗಳಿ

ಗೆ ಈ ಲೋಕದ ಕಾರ್ಯಗಳಿಂದ ಸಾಕಾಗುವದಿಲ್ಲ. ನೀನು ನಮಗೆ ನಿತ್ಯಜೀವವನ್ನೂ ನಿತ್ಯಸಂತೋಷ ಸಮಾಧಾನವನ್ನೂ ಕೊಡ ಬೇಕು. ನಮ್ಮನ್ನು ನೋಡುತ್ತಿ; ನಮ್ಮನ್ನು ತಿಳಿದಿದ್ಧಿ; ನಾವು ದಿನಾಲು ನೆನಸುವ ಆಲೋಚನೆಗಳನ್ನೂ ಆಡುವ ಮಾತುಗಳನ್ನೂ ಮಾಡುವ ಕ್ರಿಯೆಗಳನ್ನೂ ನೀನು ಬಲ್ಲಿ. ನಾವು ಈ ಲೋಕವನ್ನು ಬಿಟ್ಟ ಮೇಲಾಗಲೀ ಈ ಲೋಕದಲ್ಲಿದ್ದು ನೆನಸದ ವೇಳೆಯಲ್ಲಾಗಲಿ ನ್ಯಾಯತೀರ್ವಿಕೇ ದಿವಸದಲ್ಲಿ ನಿನ್ನ ಮುಂದೆ ಪ್ರತ್ಯಕ್ಷವಾಗ ಬೇಕು. ಆಗ ನಾವು ಮಾಡಿದ್ದೆಲ್ಲಾ ಕಾಣ ಬರುವದು. ಮತ್ತು ನಾವು ಈ ಜೀವದಲ್ಲಿ ಮಾಡಿದ ಕ್ರಿಯೆಗಳ ಪ್ರಕಾರ ನಮಗೆ ಫಲ ಶಿಕ್ಕುವದು. ಅಯ್ಯೋ, ನಮ್ಮ ಪಾಪಗಳಿಂದ ಅಲ್ಲಿ ನಮಗೆ ನ್ಯಾಯತೀರ್ವಿಕೆ ಆಗದ ಹಾಗೆ, ಈಗಲೇ ಅವುಗಳನ್ನು ಮನ್ನಿಸು. ಅಲ್ಲಿ ನಮಗೆ ನಿನ್ನಿಂದ ಮೆಚ್ಚಿಗೆ ಉಂಟಾಗುವ ಹಾಗೆ ಈಗಲೇ ನಿನ್ನ ಅಪ್ಪಣೆ ಕೈಕೊಳ್ಳುವದಕ್ಕೆ ನಮ್ಮನ್ನು ಸಿದ್ಧ ಮಾಡಿ, ನಿನ್ನ ಮುಂದೆ ಸಮರ್ಪಕವಾದದ್ದನ್ನು ನಮ್ಮಲ್ಲಿ ಉಂಟು ಮಾಡು. ನಾವು ಬಹಳ ಪ್ರಕಾರದಿಂದ ಒಳ್ಳೇ ಬೀಜವನ್ನು ಬಿತ್ತುವ ಹಾಗೆ ನಮಗೆ ಬೆಳಕನ್ನೂ ತ್ರಾಣವನ್ನೂ ಸಮಯವನ್ನೂ ಕೊಡು. ನಾವು ಈಗಿನ ಕಾಲದಲ್ಲಿ ಕಣ್ಣೀರು ಬಿಟ್ಟು ಬಿತ್ತಿದಾಗ್ಯೂ, ಕಡೆಯಲ್ಲಿ ಸಂತೋಷವಾಗಿ ಐಶ್ವರ್ಯವುಳ್ಳ ಪೈರು ಕೊಯ್ಯುವ ಹಾಗೆ ನಮಗೆ ಸಹಾಯ ಮಾಡು. ನಿನ್ನ ರಕ್ತದಿಂದ ನಮ್ಮ ಆತ್ಮಗಳನ್ನು ಶುದ್ಧ ಮಾಡು. ವ್ಯರ್ಥವಾದ ಎಲ್ಲಾ ದುಃಖವನ್ನೂ ಅಶುದ್ಧವಾದ ಎಲ್ಲಾ ಅಂಜಿಕೆಗಳನ್ನೂ ನಮ್ಮೊಳಗಿಂದ ತೆಗದು ಹಾಕಿ, ನಾವು ನಿದ್ರೆ ಮಾಡುವ ವೇಳೆಯಲ್ಲಿ ಸರ್ವ ತ್ರಾಣವುಳ್ಳ ನಿನ್ನ ಆಶ್ರಯದಲ್ಲಿ ಶೇರಿದವರಾಗಿಯೂ ನಿನ್ನ ಸಂಗಡ ಐಕ್ಯವುಳ್ಳವರಾಗಿಯೂ ಇರುವ ಹಾಗೆ ನಮಗೆ ಸಹಾಯ ಮಾಡು. ರೋಗದಲ್ಲಿಯೂ ಶೋಧನೆಯಲ್ಲಿಯೂ ಕಷ್ಟದಲ್ಲಿಯೂ ಇರುವವರನ್ನು ಕರುಣಿಸು. ನೀನೇ ಅವರಿಗೆ ಸಹಾಯ ಮಾಡಿ, ಅವರಿಗೆ ಉಪಶಮನ ಕೊಟ್ಟು,

ಅವರಲ್ಲಿಯೂ ನಿನ್ನ ಮಹಿಮೆಯನ್ನು ಪ್ರಸಿದ್ಧ ಮಾಡು! ಆಮೆನ್.

---

## ಮಂಗಳವಾರದ ಮುಂಜಾನೆ.

ಪರಿಶುದ್ಧ ದೇವರೇ, ಕರುಣೆಯುಳ್ಳ ತಂದೆಯೇ, ನೀನು ನಮ್ಮನ್ನು ಹೋದ ರಾತ್ರಿಯಲ್ಲಿ ಕೃಪೆಯಿಂದ ಕಾಪಾಡಿ, ಯಾವ ಮೋಸವಾದರೂ ನಮಗೆ ಸಂಭವಿಸದ ಹಾಗೆ ನಮ್ಮನ್ನು ಕರುಣೆಯಾಗಿ ಸಂರಕ್ಷಿಸಿದದರಿಂದ, ನಿನಗೆ ಸ್ತೋತ್ರ ಮಾಡುತ್ತೇವೆ. ಈ ಹೊತ್ತು ಮುಂಜಾನೆ ನಿನ್ನ ಬಳಿಗೆ ಬರುತ್ತೇವೆ. ನಮ್ಮ ಚಿಂತೆಗಳನ್ನು ನಿನ್ನ ಮೇಲೆ ಹೊರಿಸ ಬೇಕೆಂದು, ನೀನು ನಮಗೋಸ್ಕರ ಚಿಂತಿಸ ಮನಸ್ಸಾಗಿದ್ಧಿ ಎಂದು, ನೀನು ಹೇಳಿದಿಯಲ್ಲ? ಅದು ಕಾರಣ ನಾವು ನಿನ್ನ ಮಗನಾದ ಯೇಸು ಕ್ರಿಸ್ತನ ಹೆಸರಿನಲ್ಲಿ ನಿನ್ನನ್ನು ಬೇಡಿ ಕೊಳ್ಳುವದೇನಂದರೆ—ಈ ಹೊತ್ತು ಸಹಾ ನಮ್ಮ ಶರೀರಾತ್ಮಗಳ ಅವಸ್ಥೆಗಳನ್ನು ನೋಡಿ, ಅವುಗಳಿಗೋಸ್ಕರ ಚಿಂತಿಸಿ, ದಿನ ದಿನಕ್ಕೆ ಬೇಕಾದ ಆಹಾರಗಳನ್ನು ನಮಗೆ ದಯ ಪಾಲಿಸಿ, ಈ ಹೊತ್ತು ನಿನ್ನ ಸನ್ನಿಧಿಯಲ್ಲಿ ಸಂಚಾರ ಮಾಡುವದಕ್ಕೂ ನಂಬಿಗೆಯಿಂದಲೂ ಬುದ್ಧಿಯಿಂದಲೂ ನಿನಗೆ ಸೇವೆ ಮಾಡುವದಕ್ಕೂ ನಿನ್ನ ಪರಿಶುದ್ಧಾತ್ಮದಿಂದ ನಮ್ಮನ್ನು ಸಿದ್ಧ ಮಾಡ ಬೇಕು. ಒಂದೊಂದು ದಿನಕ್ಕೆ ಅದರದರ ಕಾಟ ಉಂಟು, ಸರಿ. ಹೀಗಿರುವದರಿಂದ ನಾವು ಇಂದಿನ ಕಾಟವನ್ನು ತಾಳ್ಮೆಯಿಂದ ಸೈರಿಸುವ ಹಾಗೆ ನಮಗೆ ಬಲ ಕೊಡು. ನಮ್ಮ ಮೇಲೆ ಬರುವ ಶ್ರಮೆಗಳಿಂದ ನಾವು ದುಃಖದಲ್ಲಿ ಆದರೂ ಅಂಧಕಾರವುಳ್ಳ ಅವಿಶ್ವಾಸದಲ್ಲಿ ಆದರೂ ಬೀಳದ ಹಾಗೆ ನಮಗೆ ಸಹಾಯ ಮಾಡು. ನಿನಗೆ ಪರಲೋಕದಲ್ಲಿಯೂ ಭೂಮಿಯಲ್ಲಿಯೂ ಎಲ್ಲಾ ಅಧಿಕಾರವದೆ. ನೀನು ಸಿಂಹಾಸನದಲ್ಲಿ ಕೂತು ಕೊಂಡು, ಎಲ್ಲಾನ್ನು ಆಳುತ್ತಿ. ಎಲ್ಲಾ ನಿನ್ನ ಕೈಯ ಕೆಳಗದೆ ಎಂದು ನಾವು ಈಗ ನೋಡುವದಿಲ್ಲ, ಆದರೂ ನಂಬುತ್ತೇವೆ. ಯಾಕಂದರೆ ನಿನ್ನ ಚಿತ್ತವಲ್ಲ

ದೆ ಒಂದು ಗುಬ್ಬಿಯಾದರೂ ಕೂದಲಾದರೂ ಭೂಮಿಯ ಮೇಲೆ ಬೀಳುವದಿಲ್ಲವೆಂದು, ನಿನ್ನ ವಾಕ್ಯದಲ್ಲಿ ಬರದದೆ. ಹೀಗಿರುವದರಿಂದ ನಂಬಿಕೆಯಾಗಿಯೂ ತ್ರಾಣವಾಗಿಯೂ ಸರ್ವವನ್ನು ಆಳುವ ನಿನಗೆ ನಮ್ಮನ್ನು ಒಪ್ಪಿಸಿ ಕೊಡುತ್ತೇವೆ. ನೀನು ನಮ್ಮ ವಿಶ್ವಾಸಕ್ಕೆ ಬಲ ಕೊಟ್ಟು, ಕೆಟ್ಟ ಮನುಷ್ಯರಾಗಲಿ ದುರಾತ್ಮಗಳಾಗಲಿ ಅನೇಕ ಕಾರ್ಯಗಳನ್ನು ನಡಿಸಿದರೂ, ನಮ್ಮ ಆಲೋಚನೆಗಳನ್ನೂ ಯತ್ನಗಳನ್ನೂ ನೀನು ತಳ್ಳಿದರೂ, ನಮ್ಮ ಮನಸ್ಸಿಗೆ ಶಾಂತಿಯನ್ನು ಕೊಡು. ನಿನ್ನ ಪರಿಶುದ್ಧ ನಾಮಕ್ಕೆ ಮಾತ್ರ ಭಯ ಪಡುವ ಹಾಗೆ ನಮಗೆ ಸ್ಥಿರ ಬುದ್ಧಿಯನ್ನು ಕೊಡು. ನೀನು ನಮಗೆ ಕೃಪೆಯಾಗಿದ್ದು, ನಮ್ಮ ಪಾಪಗಳನ್ನು ಮನ್ನಿಸಿ, ಪರಲೋಕದಲ್ಲಿರುವ ಸ್ವತಂತ್ರವನ್ನು ಪರಿಶುದ್ಧರೆಲ್ಲರ ಸಂಗಡ ನಿನ್ನಲ್ಲಿ ಇಡುವ ವಿಶ್ವಾಸದಿಂದ ಹೊಂದುವ ಹಾಗೆ ನಮ್ಮನ್ನು ಸಿದ್ಧ ಮಾಡಿದರೆ, ನಮಗೆ ಪೂರ್ಣ ಸುಖ ಪ್ರಾಪ್ತಿಯಾಗುವದು. ಆಗ ಕರುಣೆ ಕಟಾಕ್ಷವುಳ್ಳ ನಿನ್ನನ್ನು ನಿತ್ಯವಾಗಿ ಸ್ತುತಿಸುವೆವು! ಆಮೆನ್.

---

## ಮಂಗಳವಾರದ ಸಂಜೆಗೆ.

ಘನವುಳ್ಳ ದೇವರೇ, ಈಗ ತಿರಿಗಿ ಒಂದು ಹಗಲು ಕಳದು ಹೋಗಿದೆ. ಇದರಲ್ಲಿ ನೀನು ನಮಗೆ ಮಾಡಿದ ಅನೇಕ ಉಪಕಾರಗಳನ್ನು ನೆನಸಿ, ನಿನಗೆ ಪೂರ್ಣ ಮನಸ್ಸಿನಿಂದ ಸ್ತೋತ್ರ ಮಾಡುತ್ತೇವೆ. ಕೀಳ ತರದ ಈ ಜೀವದಲ್ಲಿ ಬಹಳ ಕಷ್ಟವೂ ಶ್ರಮವೂ ಉಂಟೆಂಬುವದನ್ನು ಇಂದೂ ಅನುಭವಿಸಿದ್ದೇವೆ. ಇದರ ಸಲವಾಗಿ ನಾವು ತಾಳ್ಮೆಯನ್ನು ಬಿಟ್ಟು ಗುಣುಗುಟ್ಟಿದ್ದಾದರೆ, ನಮ್ಮ ಪಾಪವನ್ನು ಮನ್ನಿಸು. ಎಲ್ಲಾ ತಿಳುವಿಕೆಯನ್ನು ಮೀರುವಂಥ ನಿನ್ನ ಸಮಾಧಾನವನ್ನು ನಮ್ಮ ಹೃದಯಗಳಲ್ಲಿ ವಿಸ್ತರಿಸಿ, ನಿನ್ನ ಪ್ರೀತಿಯನ್ನೂ ನಂಬಿಗೆಯುಳ್ಳ ಮನಸ್ಸನ್ನೂ ಹೊಸದಾಗಿ ನಮಗೆ ತಿಳಿಸಿ, ನಮ್ಮ ಹೃದಯಗಳಿಗೆ ಬಹಳ ಶಾಂತಿಯನ್ನು ಕೊಡು.

ನಿನ್ನ ಮಕ್ಕಳೆಲ್ಲಾ ಬಹಳ ಶ್ರಮವನ್ನು ದಾಟಿ, ನಿನ್ನ ರಾಜ್ಯದಲ್ಲಿ ಶೇರ ಬೇಕೆಂಬುವದು ನಿನ್ನ ಚಿತ್ತವೇ, ಸರಿ. ಆದರೆ ನಿನ್ನ ಪ್ರೀತಿಯ ಮಗನು ಸಹಾ ಅದೇ ಮಾರ್ಗವಾಗಿ ಶ್ರಮವನ್ನು ತಾಳಿ, ಮಹಿಮೆಯೊಳಗೆ ಪ್ರವೇಶಿಸಿದ್ಧಾನೆಂದು ಬಲ್ಲೆವು; ಮತ್ತು ಶ್ರಮೆಯಿಂದಲೇ ತಾಳ್ಮೆಯೂ ದೃಢವಾದ ಮನಸ್ಸೂ ಉಂಟಾಗಿ, ನಿತ್ಯವಾದ ವಿಶ್ರಾಂತಿಯ ಅಪೇಕ್ಷೆಯೂ ಭರವಸವೂ ಹೆಚ್ಚಾಗುವದೆಂದು, ತಿಳುಕೊಳ್ಳುತ್ತೇವೆ. ಇದಲ್ಲದೆ ಗೋಳಾಟವೂ ಅಳುವಿಕೆಯೂ ಕಷ್ಟವೂ ಇಲ್ಲದ ಸ್ವದೇಶವನ್ನು ನೀನು ನಮಗೆ ಸಿದ್ಧ ಮಾಡಿದ್ಧಿ ಎಂದೂ, ಅಲ್ಲಿ ಮರಣವು ಇರುವದಿಲ್ಲವೆಂದೂ, ಹಳೇದೆಲ್ಲಾ ಗತಿಸಿ ಹೋಗಿ ಎಲ್ಲಾ ಹೊಸದಾಗುವದೆಂದೂ, ಬಲ್ಲೆವು. ಆ ಸ್ವದೇಶಕ್ಕೆ ನಾವು ಶೇರುವ ಹಾಗೆ ನಮ್ಮನ್ನು ನಿನ್ನ ಆತ್ಮದಿಂದ ಶುದ್ಧ ಮಾಡಿ, ಸರಿಯಾದ ಮಾರ್ಗದಲ್ಲಿ ನಮ್ಮನ್ನು ನಡಿಸಿ, ಭೂಮಿಯಲ್ಲಿ ಪರದೇಶಿಗಳೂ ಪರವಾಸಿಗಳೂ ಆಗಿದ್ದು ಪರಲೋಕದಲ್ಲಿಯೇ ಸ್ವಂತ ಪಟ್ಣವುಳ್ಳಂಥವರಿಗೆ ತಕ್ಕ ಮನಸ್ಸನ್ನು ನಮ್ಮಲ್ಲಿ ಹುಟ್ಟಿಸು. ಈ ಲೋಕದಲ್ಲಿ ನಡವಡಿಕೆಯಾದ ಹುಚ್ಚುತನವೂ ಕೆಟ್ಟತನವೂ ನಮಗೆ ಹೆಚ್ಚು ಹೆಚ್ಚು ಅಸಹ್ಯವಾಗಿ ತೋರುವ ಹಾಗೆಯೂ, ನಾವು ಪರಲೋಕದ ಮೇಲೆ ನಮ್ಮ ಅಪೇಕ್ಷೆಯನ್ನಿಡುವ ಹಾಗೆಯೂ, ನಮಗೆ ಸಹಾಯ ಮಾಡಿ, ಪರಲೋಕದಲ್ಲಿ ಆಗುವ ಸುಖದ ಮುಂಗಡವನ್ನು ಒಂದೊಂದು ವೇಳೆ ನಮಗೆ ದಯ ಪಾಲಿಸಿ, ನಮ್ಮ ಆತ್ಮಗಳಿಗೆ ತೃಪ್ತಿ ಮಾಡು. ಕರ್ತನಾದ ಯೇಸುವೇ, ನೀನಿರುವ ಪರಲೋಕಕ್ಕೆ ಪಯಣ ಮಾಡುವ ಮಾರ್ಗಸ್ಥರಾಗಿದ್ಧೇವೆ. ನಿನ್ನ ಬಳಿಗೆ ಬರುವ ಹಾಗೆ ನಮಗೆ ಮನಸ್ಸುಂಟು; ನಮ್ಮ ಪ್ರಯಾಣದಲ್ಲಿ ಉಳಿದ ಪಾಲನ್ನು ನಾವು ಚಂದಾಗಿ ಮುಗಿಸುವ ಹಾಗೆ ನಮಗೆ ಸಹಾಯ ಮಾಡು. ಕಡೇ ಘಳಿಗೆ ಬರುವಾಗ ನೀನೇ ನಮ್ಮನ್ನು ಉದ್ಧಾರ ಮಾಡಿ, ಎಲ್ಲಾ ಕೇಡಿನೊಳಗಿಂದ ನಮ್ಮನ್ನು ರಕ್ಷಿಸು. ನಿನಗೆ ಚಲೋದೆಂದು ಕಾಣುವ ಪ್ರಕಾರ ನಮ್ಮನ್ನು ನಡಿಸಿ, ಕಡೆಯಲ್ಲಿ ನಮಗೆ ನಾಚಿಕೆ ಆಗದ ಹಾ

ಗೆ ನಮ್ಮನ್ನು ಅಂಗೀಕಾರ ಮಾಡು. ಈಗ ಈ ರಾತ್ರಿಯಲ್ಲಿಯೂ ನಮ್ಮನ್ನು ಕೃಪೆಯಾಗಿ ಕಾಪಾಡು. ನಮಗೆ ಯಾವ ಆಪತ್ತಾದರೂ ಬಾರದ ಹಾಗೆ ನಮ್ಮನ್ನು ಕಾಯಿ. ನಾವು ಶರೀರದಲ್ಲಿಯೂ ಆತ್ಮದಲ್ಲಿಯೂ ಹೊಸ ಶಕ್ತಿ ಪಡಕೊಂಡು, ನಾಳೆ ನಮ್ಮ ಕೆಲಸಗಳನ್ನು ತಿರಿಗಿ ಆರಂಭಿಸುವ ಹಾಗೆ, ನಮಗೆ ಸಹಾಯ ಮಾಡು! ಆಮೆನ್.

---

## ಬುಧವಾರದ ಮುಂಜಾನೆ.

ಪರಲೋಕದೊಳಗಿರುವ ನಮ್ಮ ತಂದೆಯೇ, ನಾವು ಸಕಲ ಭಕ್ತಿಯಿಂದಲೂ ಮರ್ಯಾದೆಯಿಂದಲೂ ಶಾಂತವಾಗಿಯೂ ಸಮಾಧಾನವಾಗಿಯೂ ಕಾಲಕ್ಷೇಪ ಮಾಡುವ ಹಾಗೆ, ಎಲ್ಲಾ ಮನುಷ್ಯರಿಗೋಸ್ಕರವೂ ಅರಸರಿಗೋಸ್ಕರವೂ ಅಧಿಕಾರದಲ್ಲಿರುವವರೆಲ್ಲರಿಗೋಸ್ಕರವೂ ಬಿನ್ನಹ, ಪ್ರಾರ್ಥನೆ, ವಿಜ್ಞಾಪನೆ, ಸ್ತೋತ್ರಗಳನ್ನು ಮಾಡ ಬೇಕೆಂದು ನೀನು ನಿನ್ನ ವಾಕ್ಯದಲ್ಲಿ ಆಜ್ಞಾಪಿಸಿ, ಇದು ನಿನ್ನ ಮುಂದೆ ಒಳ್ಳೇದೂ ಸಮರ್ಪಕವೂ ಆಗಿದೆ ಎಂದೂ, ಎಲ್ಲಾ ಮನುಷ್ಯರು ರಕ್ಷಿಸಿ ಕೊಂಡು ಸತ್ಯದ ತಿಳುವಿಕೆಗೆ ಬರಲಿಚ್ಛೈಸುತ್ತಿ ಎಂದೂ, ನಮಗೆ ನಿಶ್ಚಯವಾಗಿ ತಿಳಿಸಿದ್ಧಿ. ಹೀಗಿರುವದರಿಂದ ನಾವು ನಮ್ಮ ಮೇಲೆ ಅಧಿಕಾರ ನಡಿಸುವವರೆಲ್ಲರಿಗೋಸ್ಕರ ನಿನ್ನನ್ನು ಬೇಡಿ ಕೊಳ್ಳುತ್ತೇವೆ. ನೀನೇ ಅವರಿಗೆ ಆಶ್ರಯವಾಗಿದ್ದು, ಅವರನ್ನು ಆಶೀರ್ವದಿಸಿ, ಸಮಾಧಾನಕ್ಕಾಗಿಯೂ ನೀತಿಗಾಗಿಯೂ ಅವರ ಹೃದಯಗಳನ್ನು ಪ್ರೇರೇಪಿಸಿ, ಅವರ ಆತ್ಮಗಳನ್ನು ರಕ್ಷಿಸ ಬೇಕೆಂದು ಬೇಡುತ್ತೇವೆ. ಬೋಧಿಸುವ ಉದ್ಯೋಗದಲ್ಲಿರುವವರಿಗೋಸ್ಕರವೂ ಬಿನ್ನಹ ಮಾಡುತ್ತೇವೆ. ಅವರು ಮಾಡುವ ಉಪದೇಶದಿಂದ ಅವರಿಗೂ ಅವರನ್ನು ಕೇಳುವವರಿಗೂ ರಕ್ಷಣ್ಯ ಉಂಟಾಗುವ ಹಾಗೆ ನೀನೇ ಅವರಿಗೆ ಸಹಾಯ ಮಾಡು. ಯಜಮಾನರೆಲ್ಲರನ್ನೂ ಅವರವರ ಕು

ಟುಂಬಗಳನ್ನೂ ಆಶೀರ್ವದಿಸಿ, ಎಲ್ಲರೂ ತಮ್ಮ ತಮ್ಮ ಕೆಲಸಗಳನ್ನು ನಡಿಸೋಣದರಿಂದ ಬೇಕಾದ ಆಹಾರವನ್ನು ಪಡಕೊಳ್ಳುವ ಹಾಗೆ ಸಹಾಯ ಮಾಡು. ನಿನ್ನ ರಾಜ್ಯವು ಹೆಚ್ಚು ಹೆಚ್ಚಾಗಿ ಬರಲಿ! ಸೈತಾನನ ಕ್ರಿಯೆಗಳು ಬಲವುಳ್ಳ ನಿನ್ನ ವಾಕ್ಯದಿಂದ ಹಾಳಾಗಲಿ! ತ್ರಿಯೇಕನಾದ ದೇವರ ಹೆಸರಿನಲ್ಲಿ ಸ್ನಾನ ಹೊಂದಿ ಸಭೆಯಲ್ಲಿ ಶೇರಿದ ನಮ್ಮ ಪ್ರಿಯ ಮಕ್ಕಳು ಸ್ನಾನದಲ್ಲಿ ನೀನು ಅವರಿಗೆ ಕೊಟ್ಟ ಆಶೀರ್ವಾದವನ್ನು ಕಳಕೊಳ್ಳದ ಹಾಗೆ ಅವರನ್ನು ಕಾಪಾಡು. ಯಾರಾದರೂ ಈ ಆಶೀರ್ವಾದವನ್ನು ಕಳದು ಕೊಂಡವರಾದರೆ, ಅವರು ನಿನ್ನ ಕಡೆಗೆ ತಿರುಗುವ ಹಾಗೆ ಅವರ ಹೃದಯಗಳನ್ನು ಪ್ರೇರೇಪಿಸು. ನಮಗೆ ಪ್ರಿಯರಾದವರೆಲ್ಲರು ಪಶ್ಚಾತ್ತಾಪದಿಂದಲೂ ವಿಶ್ವಾಸದಿಂದಲೂ ಸತ್ಯಭಕ್ತರಾಗುವ ಹಾಗೆಯೂ, ನಮ್ಮ ಸಹಿತವಾಗಿ ಅವರೆಲ್ಲರು ನೀನು ವಚನ ಕೊಟ್ಟ ವಿಶ್ರಾಂತಿಯಲ್ಲಿ ಶೇರುವ ಹಾಗೆಯೂ ಮಾಡು. ರಕ್ಷಣ್ಯಕರವಾದ ನಿನ್ನ ಸತ್ಯ ವಾಕ್ಯವನ್ನು ನಾವು ಹೆಚ್ಚು ಹೆಚ್ಚಾಗಿ ತಿಳಿಯುವ ಹಾಗೆ ನಮಗೆ ಬುದ್ಧಿ ಕೊಡು. ನಾವು ಬೆಳಕಿನ ಮಕ್ಕಳಾಗಿ ಬೆಳಕಿನಲ್ಲಿಯೇ ಸಂಚಾರ ಮಾಡಿ, ಮತ್ತೊಬ್ಬರಿಗೂ ಪರಿಶುದ್ಧವಾದ ನಡತೆಯ ಮಾದ್ರಿ ತೋರಿಸುವ ಹಾಗೆ, ನಮಗೆ ಸಹಾಯ ಮಾಡು. ಇದಲ್ಲದೆ ನಮ್ಮ ಮೇಲೆ ನಿನ್ನ ಪ್ರಕಾಶವನ್ನು ಚೆಲ್ಲಿ, ನಮ್ಮ ಆತ್ಮಗಳ ಅಗಾಧವಾದ ಕೆಟ್ಟತನವನ್ನೂ ನಮ್ಮಲ್ಲಿ ಉಳಿದಿರುವ ದುರ್ಗುಣಗಳನ್ನೂ ಬೆಳಕಿಗೆ ತಂದು, ನಿನ್ನ ಮಗನ ರಕ್ತದಿಂದ ನಮ್ಮನ್ನು ಹೆಚ್ಚು ಹೆಚ್ಚಾಗಿ ಶುದ್ಧ ಮಾಡು. ನಾವು ಈ ದಿವಸದ ಆರಂಭದಲ್ಲಿ ನಮ್ಮನ್ನು ಹೊಸದಾಗಿ ನಿನಗೆ ಒಪ್ಪಿಸಿ ಕೊಡುತ್ತೇವೆ. ನೀನೇ ನಮಗೋಸ್ಕರ ಚಿಂತಿಸು. ನಮ್ಮಲ್ಲಿ ಯತ್ನೈಸು. ಈ ಹೊತ್ತೂ ಇನ್ನು ಮುಂದೆಯೂ ನಮ್ಮಿಂದ ನಿನ್ನ ಹೆಸರಿಗೆ ಮಾನವಾಗುವ ಹಾಗೆಯೂ, ನಿನ್ನ ರಾಜ್ಯವು ವಿಸ್ತಾರವಾಗುವ ಹಾಗೆಯೂ, ನೀನು ನಮ್ಮನ್ನು ಪ್ರಯೋಗಿಸು. ನಾವು ಮಣ್ಣೂ ಬೂದಿಯೂ ಆಗಿರುತ್ತೇವೆ. ಇದರ ಹೊರ್ತಾಗಿ

ನಮ್ಮಲ್ಲಿ ಅಶುದ್ಧತ್ವವೂ ಪಾಪವೂ ಬಹಳ ಉಂಟು. ಆದರೆ ಮಹಿಮೆಯುಳ್ಳ ನಿನ್ನ ಕೃಪೆಗೆ ನಮ್ಮಿಂದಲೇನಾದರೂ ಸ್ತೋತ್ರ ಉಂಟಾಗುವ ಹಾಗೆ, ನಿನ್ನ ಮಹಿಮೆಯನ್ನು ನಮ್ಮಲ್ಲಿ ಪ್ರತ್ಯಕ್ಷ ಮಾಡು! ಆಮೆನ್.

---

## ಬುಧವಾರದ ಸಂಜೆಗೆ.

ನಮ್ಮ ಕರ್ತನಾದ ಯೇಸು ಕ್ರಿಸ್ತನ ತಂದೆಯೂ ಈತನ ನಿಮಿತ್ತ ನಮ್ಮ ತಂದೆಯೂ ಆಗಿರುವ ದೇವರೇ, ಪಾಪಿಷ್ಠರಾದ ನಾವು ಕೋಪಕ್ಕೂ ಶಿಕ್ಷೆಗೂ ತಕ್ಕವರಾಗಿದ್ದಾಗ್ಯೂ, ನೀನು ನಮಗೆ ಈ ಹೊತ್ತು ಬಹಳ ಉಪಕಾರ ಮಾಡಿದದರಿಂದ ನಿನಗೆ ಸ್ತೋತ್ರ ಮಾಡುತ್ತೇವೆ. ತಾಳ್ಮೆಯಿಂದಲೂ ದೀರ್ಘಶಾಂತಿಯಿಂದಲೂ ನಮ್ಮನ್ನು ಹೊತ್ತು ಕೊಂಡು ನಿತ್ಯವಾಗಿ ನಮ್ಮ ಮೇಲೆ ಕೃಪೆಯಾಗಿರುವಂಥ ನಿನ್ನನ್ನು ಕೊಂಡಾಡುತ್ತೇವೆ. ನಮ್ಮ ಪಾಪಗಳಿಗೋಸ್ಕರವೂ ಸಮಸ್ತ ಲೋಕದವುಗಳಿಗೋಸ್ಕರವೂ ಶಾಂತಿಕರವಾದ ಬಲಿಯಾಗಿರುವ ನೀತಿಯುಳ್ಳ ಕಾರ್ಯಕರ್ತನು ನಮಗೆ ಇದ್ದಾನೆಂದು, ನೀನು ನಮಗೆ ಮಾಡುವ ಉಪಕಾರಗಳಿಂದ ನಮಗೆ ನಿಶ್ಚಯವಾಗುತ್ತದೆ. ಯಾಕಂದರೆ ಆತನ ಸಹಾಯದ ಹೊರ್ತು ನಮಗೆ ಅಂಥಾ ಉಪಕಾರಗಳು ಹ್ಯಾಗೆ ಶಿಕ್ಕ್ಯಾವು? ಆದದರಿಂದ ನಾವು ಈ ಕಾರ್ಯಕರ್ತನ ಮೇಲೆ ಭರವಸವಿಟ್ಟು, ನಿನಗೆ ಬೇಡಿ ಕೊಳ್ಳುವದೇನಂದರೆ—ನೀನೇ ಕೊಟ್ಟದ್ದರ ಹೊರ್ತಾಗಿ ಮತ್ತೇನಿಲ್ಲದ ಬಡವರಾದ ನಮ್ಮನ್ನು ಪರಾಮರಿಕೆ ಮಾಡಿ, ನಮ್ಮ ಆತ್ಮಗಳಿಗೂ ಶರೀರಗಳಿಗೂ ಅಗತ್ಯವಾದವುಗಳನ್ನು ದಯ ಪಾಲಿಸಿ, ಸದಾಕಾಲವೂ ನಿನ್ನ ಕರುಣೆಯನ್ನು ನಮ್ಮ ವಿಷಯದಲ್ಲಿ ಪ್ರಸಿದ್ಧ ಮಾಡು. ನೀನು ನಮ್ಮನ್ನು ಕೋಪಕ್ಕಾಗಿ ಅಲ್ಲ, ರಕ್ಷಣ್ಯವನ್ನು ಪಡಕೊಳ್ಳುವದಕ್ಕಾಗಿಯೇ ನೇಮಿಸಿದ್ಧೀ; ನೀನು ಪ್ರೀತಿಯೇ, ಸರಿ; ಸಹಾಯ ಮಾಡುವದರಲ್ಲಿಯೂ ಆದರಿ

ಸುವದರಲ್ಲಿಯೂ ನಿನಗೆ ಸಂತೋಷವಾಗುತ್ತದೆ; ಪಾಪಿಷ್ಠರು ಸಾಯ ಬೇಕೆಂತಲ್ಲ, ಅವರ ಮನಸ್ಸು ತಿರಿಗಿ ಕೊಂಡು ಅವರು ಬದುಕ ಬೇಕೆಂತ, ನಿನಗೆ ಮನಸ್ಸುಂಟು. ನಮ್ಮನ್ನು ನರಕದೊಳಗೆ ಬೀಳಿಸುವ ನಮ್ಮ ಪಾಪಗಳನ್ನು ಮನ್ನಿಸಿ, ನಮ್ಮನ್ನು ಶುದ್ಧ ಮಾಡಿ, ನೀನು ನಮಗೆ ಕೊಡ ಮನಸ್ಸಾಗಿರುವಂಥ ರಕ್ಷಣ್ಯವನ್ನು ನಾವು ಪಡ ಕೊಳ್ಳುವಂತೆ ನಮ್ಮನ್ನು ಸಿದ್ಧ ಮಾಡು. ನಿನ್ನ ಪರಿಶುದ್ಧಾತ್ಮವನ್ನು ನಮಗೆ ಕೊಡು. ಆತನು ನಮ್ಮಲ್ಲಿ ಜ್ಞಾನವನ್ನು ಹುಟ್ಟಿಸಿ, ನಿನ್ನ ತಿಳುವಿಕೆಯನ್ನು ನಮ್ಮಲ್ಲಿ ಪ್ರಕಟ ಮಾಡಲಿ! ಆತನು ನಮಗೆ ಬಲ ಕೊಟ್ಟು, ನಮ್ಮನ್ನು ಪ್ರೀತಿಯಲ್ಲಿ ಸ್ಥಾಪಿಸಲಿ! ಆತನು ನಮ್ಮನ್ನು ಶಿಕ್ಷಿಸಿ, ಪರಿಶುದ್ಧ ನಡತೆಗಾಗಿ ಪ್ರೇರೇಪಿಸಲಿ! ಪ್ರಪಂಚದ ಕೆಲಸಗಳಿಂದ ಈ ಹೊತ್ತು ನಮ್ಮಲ್ಲಿ ಹುಟ್ಟಿದ ಎಲ್ಲಾ ದುರಾಶೆಗಳನ್ನೂ ಮನಸ್ಸಿನ ಕಳವಳವನ್ನೂ ನಿನ್ನ ಆತ್ಮದ ಮೂಲವಾಗಿ ತೆಗದು ಹಾಕಿ, ನಮ್ಮ ಆತ್ಮಗಳನ್ನು ಕ್ಷೇಮದಲ್ಲಿಯೂ ಶಾಂತಿಯಲ್ಲಿಯೂ ಇರಿಸಿ, ಸಮಾಧಾನದಿಂದ ನಿದ್ರೆ ಮಾಡುವ ಹಾಗೆ ಅಪ್ಪಣೆ ಕೊಡು. ಸರ್ವತ್ರಾಣ ಉಳ್ಳ ನಿನ್ನ ಆಶ್ರಯದಲ್ಲಿ ನಮ್ಮನ್ನು ಇಟ್ಟು, ಈ ರಾತ್ರಿಯಲ್ಲಿ ನಮಗೆ ಯಾವ ಆಪತ್ತಾದರೂ ಬಾರದ ಹಾಗೆ ನಮ್ಮನ್ನು ಕಾಪಾಡಿ, ದಿನದಿನಕ್ಕೆ ಹೊಸದಾಗುವ ನಿನ್ನ ಕೃಪೆಯನ್ನು ನಾಳೆ ಮುಂಜಾನೆ ನಮ್ಮನ್ನು ಎದುರುಗೊಳ್ಳ ಮಾಡು! ಆಮೆನ್.

---

## ಬ್ರಹಸ್ಪತಿವಾರದ ಮುಂಜಾನೆ.

ಕರ್ತನಾದ ಯೇಸುವೇ, ತಿರಿಗಿ ಒಂದು ದಿವಸಕ್ಕೆ ಆರಂಭವಾಯಿತು. ನೀನು ಕಳದ ರಾತ್ರಿಯಲ್ಲಿ ನಿನ್ನ ಕೈಯನ್ನು ನಮ್ಮ ಮೇಲೆ ಚಾಚಿ, ಅನೇಕ ವಿಧವಾದ ಕೇಡಿಗೆ ನಮ್ಮನ್ನು ತಪ್ಪಿಸಿದದರಿಂದ ನಿನಗೆ ಸ್ತೋತ್ರ ಮಾಡುತ್ತೇವೆ. ಈ ಹೊತ್ತು ನಮಗೆ ಏನು ಸಂಭವಿಸುವದೆಂದು ತಿಳಿಯುವದಿಲ್ಲ; ಆದರೆ ನಮ್ಮ ಕಣ್ಣು

ಗಳು ನಿನ್ನ ಮೇಲೆ ದೃಷ್ಟಿ ಇಡುತ್ತವೆ. ಯಾಕಂದರೆ ನಿನ್ನಲ್ಲಿ ಎಲ್ಲಾ ಸಂಪೂರ್ಣತ್ವವೂ ವಾಸವಾಗಿ ಅದೆ. ನಿನ್ನ ಸಂಪೂರ್ಣತ್ವದೊಳಗಿಂದ ನಾವು ಸಹ ಜೀವಕ್ಕೂ ಭಕ್ತಿಗೂ ಸಂಬಂಧವಾದವುಗಳನ್ನೆಲ್ಲಾ ಹೊಂದ ಬೇಕು. ನಾವು ಬಲಹೀನರಾಗಿದ್ಧೇವೆ; ನೀನು ನಮಗೆ ಬಲ ಕೊಡು. ನಾವು ಕತ್ತಲೆಯೂ ಅಜ್ಞಾನವೂ ಉಳ್ಳವರಾಗಿದ್ಧೇವೆ; ನೀನು ನಮಗೆ ಪ್ರಕಾಶ ಕೊಡು. ನಾವು ಅಶುದ್ಧರಾಗಿದ್ಧೇವೆ; ನಿನ್ನ ರಕ್ತದಿಂದ ನಮ್ಮನ್ನು ಶುದ್ಧ ಮಾಡು. ನಮ್ಮ ಸುತ್ತಲಾಗಿ ದೃಶ್ಯಾದೃಶ್ಯವಾದ ವೈರಿಗಳು ಇರುತ್ತಾರೆ; ನೀನು ನಿನ್ನ ಸರ್ವತ್ರಾಣದಿಂದ ನಮ್ಮನ್ನು ಪರಿಪಾಲನೆ ಮಾಡಿ, ನಿನ್ನ ಕೈಯೊಳಗಿಂದ ಯಾರಾದರೂ ನಮ್ಮನ್ನು ಕೀಳಲಾರದ ಹಾಗೆ ನಮ್ಮನ್ನು ಘಟ್ಟಿಯಾಗಿ ಹಿಡಿ. ನಾವು ನಮ್ಮ ಸ್ವಂತ ಬಲ, ಜ್ಞಾನ ನೀತಿಗಳನ್ನು ನಂಬಿ ಈ ದಿವಸವನ್ನು ತೊಡಗಿಸುವದಕ್ಕಾದರೂ ಮುಗಿಸುವದಕ್ಕಾದರೂ ಮನಸ್ಸಿಲ್ಲದೆ, ನಿನ್ನಲ್ಲಿ ವಿಶ್ವಾಸವಿಡುವವರನ್ನು ನಾಚಿಗೆ ಹೊಂದಗೊಡಿಸದೆ ಇರುವ ಕರುಣೆಯುಳ್ಳ ನಿನ್ನ ಮೇಲೆ ನಂಬಿಕೆ ಇಡ ಮನಸ್ಸಾಗಿದ್ಧೇವೆ. ಈ ನಂಬಿಕೆಯನ್ನು ನಮ್ಮಲ್ಲಿ ಸ್ಥಿರ ಮಾಡಿ, ಹೆಚ್ಚಿಸು. ಇಹದ ಸುಖದಿಂದ ಗರ್ವವೂ ಕೆಟ್ಟ ಧೈರ್ಯವೂ ನಮ್ಮಲ್ಲಿ ಹುಟ್ಟದ ಹಾಗೆಯೂ, ಇಹದ ಆಪತ್ತುಗಳಿಂದ ನಾವು ಅವಿಶ್ವಾಸದಲ್ಲಿಯೂ ಅಪನಂಬಿಗೆಯಲ್ಲಿಯೂ ಬೀಳದ ಹಾಗೆಯೂ, ನಮ್ಮನ್ನು ಕಾಪಾಡು. ಹೊರಗಿನ ಕಾರ್ಯಗಳೂ ಲೋಕದ ವ್ಯವಹಾರಗಳೂ ಹ್ಯಾಗೆ ನಡದರೂ, ನಾವು ಸ್ಥಿರವಾಗಿಯೂ ದೃಢವಾಗಿಯೂ ನಿನ್ನ ಆಜ್ಞೆಗಳ ಮಾರ್ಗದಲ್ಲಿ ನಡೆಯುವ ಹಾಗೆ ನಮಗೆ ಸಹಾಯ ಮಾಡು. ನೀನು ತಂದೆಯಿಂದ ಹೊರಟು, ಈ ಲೋಕಕ್ಕೆ ಬಂದಿ. ಹೀಗಿರುವದರಿಂದ ಈ ಲೋಕವು ಎಂಥಾದ್ದೆಂದೂ, ನಿನ್ನ ಮಕ್ಕಳಿಗೆ ಈ ಲೋಕದಲ್ಲಿ ಯಾವ ಶ್ರಮೆಗಳೂ ಯಾವ ಅವಸ್ಥೆಗಳೂ ಆಗುತ್ತವೆಂದೂ, ನೀನು ಅನುಭವಿಸಿ, ಬಲ್ಲಿ. ಆದದರಿಂದ ನಮಗೆ ಸಹಾಯ ಮಾಡು. ನಮನ್ನು ಆದರಿಸು. ನಮಗೋಸ್ಕರ ಚಿಂತೆ ಮಾಡು. ತಂದೆಯ ಬಳಿಗೆ ಬ

ರ ಬೇಕೆಂಬುವ ನಮಗೆ ನೀನು ಮಾರ್ಗವಾಗು. ನೀನಿದ್ದಲ್ಲಿಯೇ ನಾವು ಬಂದು, ನಿನ್ನ ಮಹಿಮೆಯನ್ನು ನೋಡುವ ತನಕ, ನಮ್ಮನ್ನು ಬಿಡದೆ ಪರಾಮರಿಸು! ಆಮೆನ್.

---

## ಬ್ರಹಸ್ಪತಿವಾರದ ಸಂಜೆಗೆ.

ಮಹಿಮೆಯುಳ್ಳ ದೇವರೇ, ನೀನು ನಿತ್ಯನೂ ಸರ್ವತ್ರಾಣಿಯೂ ಆಗಿರುತ್ತಿ. ನಿನಗೆ ವಿರೋಧವಾಗಿ ಯಾರೂ ಏನೂ ನಡಿಸ ಕೂಡದು. ಸರ್ವ ಲೋಕವು ನಿನ್ನ ಮುಂದೆ ಅಣುವಿನಷ್ಟು. ಇದರ ಹೊರ್ತು ಪರಿಶುದ್ಧ ದೂತರೆಂಬ ಮಹಾ ಶೂರರ ದೊಡ್ಡ ಸೈನ್ಯವು ನಿನಗುಂಟು. ಅವರೆಲ್ಲರೂ ನಿನ್ನ ಅಪ್ಪಣೆಯ ಪ್ರಕಾರ ಮಹಾ ಕ್ರಿಯೆಗಳನ್ನು ನಡಿಸುವದಕ್ಕೆ ಸಿದ್ಧರಾಗಿದ್ದಾರೆ; ಇವರನ್ನು ನೀನು ಆ ಬ್ರಹಸ್ಪತಿವಾರದ ಸಾಯಂಕಾಲದಲ್ಲಿ ನಿನ್ನ ಪ್ರಿಯ ಮಗನ ಬಳಿಗೆ ಕಳುಹಿಸಿ, ಕಠಿಣವಾದ ಹೋರಾಟದಲ್ಲಿ ಆತನಿಗೆ ಬಲ ಕೊಟ್ಟೆ. ರಕ್ಷಣ್ಯವನ್ನು ಬಾಧ್ಯವಾಗಿ ಹೊಂದುವ ಭಕ್ತರ ಸೇವೆಗೆ ಈಗಲೂ ಅವರನ್ನು ಕಳುಹಿಸುತ್ತಿ. ಇದಲ್ಲದೆ ಭಕ್ತರು ಈ ಲೋಕವನ್ನು ಬಿಟ್ಟು ಹೋಗುವಲ್ಲಿಯೂ ಈ ಲೋಕದ ಅಂತ್ಯವು ಬರುವಲ್ಲಿಯೂ ಆ ನಿನ್ನ ಶೂರರಿಗೆ ಕೆಲಸವದೆ; ಈ ಪ್ರಕಾರ ನೀನು ನಿನ್ನ ರಾಜ್ಯವನ್ನು ಮಹಿಮೆಯಾಗಿ ಸ್ಥಾಪಿಸಿದದರಿಂದ ನಿನಗೆ ಸ್ತೋತ್ರ ಮಾಡುತ್ತೇವೆ. ಈ ರಾತ್ರಿಯಲ್ಲಿಯೂ, ನಾವು ಇಹದಲ್ಲಿ ಸಂಚಾರ ಮಾಡುವ ಎಲ್ಲಾ ಕಾಲದಲ್ಲಿಯೂ, ನೀನು ನಿನ್ನ ಪರಿಶುದ್ಧ ದೂತರ ಆಶ್ರಯದಲ್ಲಿ ನಮ್ಮನ್ನು ಇರಿಸಬೇಕೆಂದು, ಬೇಡಿ ಕೊಳ್ಳುತ್ತೇವೆ. ಅವರು ನಿನ್ನ ಆಳುಗಳಾಗಿದ್ದಾರೆ. ನಾವು ಅವರ ಜತೆಯಾಳುಗಳಾಗುವ ಹಾಗೆ ನಮಗೆ ಸಹಾಯ ಮಾಡು. ಅವರು ಯಾವಾಗಲೂ ನಿನ್ನನ್ನು ಸ್ತುತಿಸುತ್ತಾರೆ; ಬಲಹೀನರಾಗಿದ್ದರೂ ನಾವು ಸಹ ನಿನ್ನನ್ನು ಸ್ತುತಿಸುತ್ತೇವೆ. ಅವರು ನಿನ್ನ ಮುಖವನ್ನು ನೋಡುತ್ತಾರೆ; ನಾವು ಅದನ್ನು ಈಗ

ನೋಡುವದಿಲ್ಲ; ಆದರೆ ಆ ಲೋಕದಲ್ಲಿ ಅದನ್ನು ನೋಡ ಬಯ
ಸುತ್ತೇವೆ. ಇದಕ್ಕಾಗಿ ನೀನು ನಮ್ಮನ್ನು ನಿನ್ನ ಪರಿಶುದ್ಧಾತ್ಮದ
ಮೂಲವಾಗಿ ಸಿದ್ಧ ಮಾಡ ಬೇಕೆಂದು, ಬೇಡಿ ಕೊಳ್ಳುತ್ತೇವೆ. ನಿ
ನಗೆ ತಿರಿಗಿ ಬಿದ್ದ ದೂತರು ನಮ್ಮನ್ನು ಹೊಂಚಿ ನೋಡಿ, ನಮಗೆ
ನಷ್ಟ ಮಾಡ ಬೇಕೆಂದಿದ್ದಾರೆ. ಅವರ ಮೋಸಗಳಿಗೂ ಅವರ ಬ
ಲವಾದ ವೈರತ್ವಕ್ಕೂ ಎಂದಾದರೂ ಒಳಗಾಗದ ಹಾಗೆ ನಿನ್ನ ಬ
ಲವಾದ ಆಶ್ರಯದಲ್ಲಿ ನಮ್ಮನ್ನಿಟ್ಟು, ಭದ್ರ ಮಾಡು. ಕರ್ತನಾದ
ಯೇಸುವೇ, ನೀನು ನಿನ್ನ ಪ್ರಿಯ ರಕ್ತವನ್ನು ಚೆಲ್ಲಿ, ನಮ್ಮನ್ನು
ಕೊಂಡು ಕೊಂಡಿ. ಆದದರಿಂದ ನಾವು ನಮ್ಮವರಲ್ಲ; ಹ್ಯಾಗಾ
ದರೂ ಸೈತಾನನ ಅಧಿಕಾರದೊಳಗೆ ಇರುವವರಲ್ಲ. ಆದದರಿಂದ
ನೀನು ನಿನ್ನ ಸ್ವಾಸ್ಥ್ಯವಾಗಿರುವ ನಮ್ಮನ್ನು ಅಂಗೀಕಾರ ಮಾಡಿ,
ನಾವು ನಿನ್ನ ರಾಜ್ಯದಲ್ಲಿ ನಿನ್ನ ಕೈಯ ಕೆಳಗೆ ಬದುಕುವ ಹಾಗೆ
ಯೂ, ನಿತ್ಯನೀತಿ ನಿರ್ಮಲತ್ವ ಸೌಖ್ಯಗಳಲ್ಲಿ ನಿನಗೆ ಸೇವಿಸುವ
ಹಾಗೆಯೂ, ನಿನ್ನ ಪರಿಶುದ್ಧಾತ್ಮದ ವರಗಳನ್ನು ಕೊಟ್ಟು, ನಮ್ಮ
ನ್ನು ಸಿದ್ಧ ಮಾಡು. ನಾವು ಮಾಂಸದ ಇಚ್ಛೆಗೆ ಅನುಸರಣೆಯಾ
ಗಿ ನಡಿಸಿದ ಪಾಪಗಳನ್ನೆಲ್ಲಾ ಮನ್ನಿಸು. ನಾವು ಮಾಡ ತಕ್ಕದ್ದ
ನ್ನು ಅನೇಕ ಸಾರಿ ಮಾಡದೆ ಹೋದೆವೆಂಬ ತಪ್ಪನ್ನು ಸಹಾ ಪ
ರಿಹರಿಸು. ಮತ್ತು ನಮ್ಮ ಮೊದಲನೇ ಕ್ರಿಯೆಗಳಿಂದ ಕಡೆಯವು
ಗಳು ಚಲೋವಾಗುವ ಹಾಗೆಯೂ, ನಾವು ನಿನ್ನ ಮಾನಕ್ಕಾಗಿ
ನೀತಿಯ ಫಲಗಳಿಂದ ತುಂಬುವ ಹಾಗೆಯೂ, ನಮಗೆ ಸಹಾಯ
ಮಾಡು! ಆಮೆನ್.

---

## ಶುಕ್ರವಾರದ ಮುಂಜಾನೆ.

ಕರ್ತನಾದ ಯೇಸುವೇ, ನೀನು ಸದಾಕಾಲ ಯಾಜಕನಾ
ಗಿದ್ದು, ನಿನ್ನ ಮುಖಾಂತರವಾಗಿ ದೇವರ ಬಳಿಗೆ ಬರುವವರನ್ನು
ಯಾವಾಗ್ಯೂ ವಿಮೋಚಿಸ ಶಕ್ತನಾಗಿದ್ದು, ನಿರಂತರವಾಗಿ ಬದು

ಕಿ, ಅವರಿಗೋಸ್ಕರ ಪ್ರಾರ್ಥನೆ ಮಾಡುತ್ತಿ. ಈ ನಿಶ್ಚಯವಾದ ಮಾತಿಗೆ ನಾವು ಈ ದಿವಸದಲ್ಲಿ ಸಂತೋಷ ಪಡುತ್ತೇವೆ. ಯಾಕಂದರೆ ಶುಕ್ರವಾರವೆಂಬ ಈ ದಿವಸದಲ್ಲಿ ನೀನು ಯಾಜಕನಾಗಿ ನಿನ್ನನ್ನು ಕ್ರೂಜೆಯಲ್ಲಿ ನಮ್ಮ ಪಾಪಗಳಿಗೋಸ್ಕರ ಅರ್ಪಿಸಿದಿ. ನೀನು ಪಾಪಿಷ್ಟರಾದ ನಮಗೆ ಮಾಡಿದ ದೊಡ್ಡ ಪ್ರೀತಿ ಅಂತಃಕರಣಗಳ ನಿಮಿತ್ತ ನಿನಗೆ ಸ್ತುತಿ ಸ್ತೋತ್ರ ಉಂಟಾಗಲಿ! ಪರಲೋಕದಲ್ಲಿರುವ ನಮ್ಮ ತಂದೆಯೇ, ನಿನ್ನ ಮಗನು ಅರ್ಪಿಸಿದ ಬಲಿಯನ್ನು ನೋಡಿ, ಅದರ ಸಲವಾಗಿ ನಮ್ಮ ಪಾಪಗಳನ್ನೆಲ್ಲಾ ಮನ್ನಿಸು. ಇದಲ್ಲದೆ ನಾವು ನಿನಗೆ ತಕ್ಕ ಸ್ತೋತ್ರಗಳನ್ನು ಮಾಡಿ, ದಾಸತ್ವದ ಅಂಜಿಕೆಯಿಂದಲೂ ಕೆಟ್ಟ ಧೈರ್ಯದಿಂದಲೂ ಅಲ್ಲ, ಸತ್ಯಪ್ರೀತಿಯಿಂದಲೂ ಭಯದಿಂದಲೂ ನಿನ್ನ ಮುಂದೆ ನಡದು ಕೊಳ್ಳುವ ಹಾಗೆ, ಪ್ರಾರ್ಥನೆಯ ಆತ್ಮವನ್ನು ನಮಗೆ ಕೊಟ್ಟು, ನಮ್ಮನ್ನು ಆಶೀರ್ವದಿಸು. ಕರ್ತನಾದ ಯೇಸುವೇ, ನಿನಗೆ ನಿತ್ಯವಾದ ಯಾಜಕತ್ವವು ಇರುವದರಿಂದ ನಮಗೆ ಅದರ ಮೂಲವಾಗಿ ನಿತ್ಯವಾದ ಕೃಪೆಯೂ ನಿತ್ಯವಾದ ಜೀವವೂ ನಿತ್ಯವಾದ ಸ್ವತಂತ್ರವೂ ಶಿಕ್ಕುವ ಹಾಗೆ ಮಾಡು. ಒಬ್ಬನೇ ಮಧ್ಯಸ್ಥಗಾರನಾದ ನಿನ್ನ ಮುಖಾಂತರವಾಗಿ ದೇವರ ಬಳಿಗೆ ಸಮಿೂಪಿಸುವವರಾದ ನಮ್ಮನ್ನೂ, ನಮ್ಮ ಸಂಗಡ ಅದೇ ವಿಶ್ವಾಸ ಕೈಕೊಳ್ಳುವವರೆಲ್ಲರನ್ನೂ, ನಿತ್ಯಸೌಖ್ಯದಲ್ಲಿ ಶೇರಿಸು. ನಮಗೆ ಯಾವ ಶೋಧನೆಗಳಿಂದಲೂ ಮೋಸವಾಗದ ಹಾಗೆ ನಿನ್ನ ಜೀವದ ತ್ರಾಣದಿಂದ ನಮ್ಮನ್ನು ಬಲ ಪಡಿಸಿ, ಎಲ್ಲಾ ಕೇಡಿಗೆ ನಮ್ಮನ್ನು ತಪ್ಪಿಸು. ನೀನು ನಮಗೋಸ್ಕರ ಮಾಡುವ ಬಿನ್ನಹಗಳು ಶ್ರುತವಾಗಲಿ! ತಂದೆಯ ಮಹಿಮೆಗಾಗಿ ನಿನ್ನ ನೀತಿಯನ್ನು ನಮಗೆ ದಯ ಮಾಡಿ, ನಮ್ಮನ್ನು ಪರಿಶುದ್ಧರಾಗ ಮಾಡಿ, ಕಡೆಯಲ್ಲಿ ನಮ್ಮನ್ನು ಸಿದ್ಧರಾಗಲೀಸಿ, ನಿನ್ನ ತಂದೆಯ ಸನ್ನಿಧಿಯಲ್ಲಿ ನಿಲ್ಲಿಸು, ನೀನು ಅರ್ಪಿಸಿದ ಬಲಿಯು ಸದಾಕಾಲ ನೆಲೆಯಾಗಿದೆ. ನಿನ್ನ ವಿಜ್ಞಾಪನೆ ಬಲವುಳ್ಳದ್ದೂ, ನಿನ್ನ ಪ್ರೀತಿಯು ಮಿತಿ ಇಲ್ಲದ್ದೂ ಎಲ್ಲಾ ಜ್ಞಾನವನ್ನು ಮಿೂರುವಂಥಾದ್ದೂ,

ಆಗಿದೆ; ಆದರೆ ನಮ್ಮ ವಿಶ್ವಾಸವು ಬಲಹೀನವಾದದ್ದೂ, ನಮ್ಮ ಜ್ಞಾನವು ಬಹಳ ಮೊಬ್ಬಾದದ್ದೂ, ಆಗಿದೆ; ಆದ ಕಾರಣ ನಿನ್ನನ್ನು ತಿಳಿಯುವ ಬಗ್ಯೆ ನಮಗೆ ಹೆಚ್ಚು ಬೆಳಕು ಕೊಡ ಬೇಕೆಂದೂ, ನೀನು ನಮ್ಮ ವಿಶ್ವಾಸಕ್ಕೆ ಹೆಚ್ಚಾದ ಬಲ ಕೊಡ ಬೇಕೆಂದೂ, ಬೇಡಿ ಕೊಳ್ಳುತ್ತೇವೆ. ಈ ಹೊತ್ತು ಸಹಾ ನಾವು ಕೆಲಸ ಮಾಡುವ ವೇಳೆಯಲ್ಲಿ ನಿನ್ನ ಪರಿಶುದ್ಧಾತ್ಮವು ನಿನ್ನ ಪರಿಶುದ್ಧ ವಾಕ್ಯದ ಬೇರೆ ಬೇರೆ ವಚನಗಳನ್ನು ನಮ್ಮ ನೆನಪಿಗೆ ತಂದು, ನಮ್ಮ ಆತ್ಮಗಳಿಗೆ ಉಪಶಮನ ಮಾಡಲಿ! ಈ ಪ್ರಕಾರ, ಪ್ರಿಯ ಕರ್ತನೇ, ನೀನು ನಿನ್ನ ಕೃಪೆಗೋಸ್ಕರ ನಮ್ಮನ್ನು ನಿನ್ನ ಐಕ್ಯದಲ್ಲಿ ಕಾಪಾಡು! ಆಮೆನ್.

---

## ಶುಕ್ರವಾರದ ಸಂಜೆಗೆ.

ಕರ್ತನಾದ ಯೇಸುವೇ, ನೀನು ಶುಕ್ರವಾರವೆಂಬ ಈ ದಿವಸದಲ್ಲಿ ಕ್ರೂಜೆಯಲ್ಲಿ ತೂಗಿ, ಸತ್ತು ಹೋಗಿ, ವಿಧೇಯತ್ವಕ್ಕೂ ತಾಳ್ಮೆಗೂ ಉತ್ತಮವಾದ ಮಾದ್ರಿ ತೋರಿಸಿ, ನಮ್ಮ ಪಾಪಕ್ಕೂ ಸಮಸ್ತ ಲೋಕದ ಪಾಪಗಳಿಗೂ ಪ್ರಾಯಶ್ಚಿತ್ತದ ಬಲಿಯಾದಿ. ನೀನು ನಿನ್ನನ್ನು ಕ್ರೂಜೆಗೆ ಹಾಕಿದವರಿಗೋಸ್ಕರ ಬೇಡಿ ಕೊಂಡಿಯಲ್ಲ? ಅದೇ ಪ್ರಕಾರ ನಾವು ನಮ್ಮ ವೈರಿಗಳಿಗೆ ಪ್ರೀತಿ ಮಾಡುವ ಹಾಗೆ, ನಮ್ಮ ಹೃದಯಗಳನ್ನು ಪ್ರೇರೇಪಿಸು. ಮರಿಯಳು ಯೋಹಾನನನ್ನು ಮಗನೆಂದೂ, ಯೋಹಾನನು ಅವಳನ್ನು ತಾಯಿ ಎಂದೂ, ಪ್ರೀತಿ ಮಾಡ ಬೇಕೆಂದು, ನೀನು ಆಜ್ಞಾಪಿಸಿದಿಯಲ್ಲ? ಅದೇ ಪ್ರಕಾರ ನಾವು ಸತ್ಯಪ್ರೀತಿಯಿಂದ ಒಬ್ಬರ ಸಂಗಡ ಒಬ್ಬರು ವಾಸ ಮಾಡಿ, ನಿನ್ನ ಮಕ್ಕಳಿಗೆಲ್ಲಾ ಮನಃಪೂರ್ವಕವಾಗಿ ಪ್ರೀತಿ ಮಾಡುವ ಹಾಗೆ, ನಮ್ಮನ್ನು ಎಚ್ಚರಿಸು. ನೀನು ಆನಂದಕರವಾದ ಕಟಾಕ್ಷದಿಂದ ಪಶ್ಚಾತ್ತಾಪ ಮಾಡಿದ ಆ ಕಳ್ಳನಿಗೆ ಪರದೈಸದಲ್ಲಿ ಶೇರ ಬೇಕೆಂಬ ವಚನವನ್ನು ಕೊಟ್ಟೆಯಲ್ಲ? ಅದೇ ಪ್ರಕಾರ ನಮ್ಮಲ್ಲಿ ನಿತ್ಯಜೀವದ ಸಂತೋಷವಾದ ಭರವ

ಸವನ್ನು ಹುಟ್ಟಿಸು. ಮೂರು ತಾಸಿನ ಕತ್ತಲೆ ಆದ ಮೇಲೆ, ನನ್ನ ದೇವರೇ! ನನ್ನ ದೇವರೇ! ಯಾತಕ್ಕೆ ನನ್ನ ಕೈ ಬಿಟ್ಟೆ! ಎಂದು, ಹೇಳಿದಿಯಲ್ಲ? ನಮಗೂ ಒಂದೊಂದು ವೇಳೆ ದುಃಖ ಬರುವಾಗ, ನೀನು ನಮ್ಮ ವಿಶ್ವಾಸಕ್ಕೆ ದೃಢ ಕೊಟ್ಟು, ತಕ್ಕ ಕಾಲದಲ್ಲಿಯೇ ನಮಗೆ ಉಪಶಮನವೂ ಸಹಾಯವೂ ಶಿಕ್ಕ ಮಾಡು. ನೀನು ಕಠಿಣವಾದ ನೀರಡಿಕೆಯನ್ನು ಸೈರಿಸಿದಿಯಲ್ಲ? ಆದದರಿಂದ ನಾವು ಅನ್ನಪಾನಗಳನ್ನು ಮಿತಿಯಾಗಿ ಅನುಭವಿಸುವ ಹಾಗೆ ನಮ್ಮನ್ನು ಶಿಕ್ಷಿಸಿ, ಉದರಪೋಷಣದಿಂದ ನಾವು ದುರಾಶೆಗಳಲ್ಲಿ ಬೀಳದ ಹಾಗೆ ನಮ್ಮನ್ನು ಕಾಪಾಡು. ತೀರಿತೆಂದು ನೀನು ಹೇಳಿದಿಯಲ್ಲ? ಆದದರಿಂದ ನಾವೇ ನಮ್ಮ ರಕ್ಷಣ್ಯಕ್ಕಾಗಿ ಏನಾದರೂ ಉಪಾಯ ಮಾಡಲಾರೆವೆಂದು ನಮಗೆ ತೋರಿಸಿ, ನಮ್ಮ ಸ್ವಂತ ನೀತಿಯ ವಿಷಯವಾದ ಗರ್ವವನ್ನು ನಮ್ಮಲ್ಲಿ ಹೀನ ಮಾಡು. ಕಡೆಗೆ ನೀನು ನಿನ್ನ ಆತ್ಮವನ್ನು ತಂದೆಯ ಕೈಗಳಿಗೆ ಒಪ್ಪಿಸಿದ ಪ್ರಕಾರ ನಾವು ಈಗ ನಮ್ಮ ಆತ್ಮಗಳನ್ನು ನಿನಗೆ ಒಪ್ಪಿಸಿ ಕೊಡುತ್ತೇವೆ. ನೀನು ಅವುಗಳಲ್ಲಿ ವಾಸ ಮಾಡಿ, ಯತ್ನೈಸಿ, ಅವುಗಳನ್ನು ಪಾಪದಿಂದ ಶುದ್ಧ ಮಾಡು. ಇದಲ್ಲದೆ ನಮ್ಮ ಆತ್ಮಗಳು ಶರೀರಗಳನ್ನು ಅಗಲುವಾಗ ನೀನು ನಮ್ಮನ್ನು ಕೃಪೆಯಾಗಿ ಪರಲೋಕದೊಳಗಿರುವ ನಿನ್ನ ರಾಜ್ಯದಲ್ಲಿ ಶೇರಿಸಿ, ನಾವು ಸತ್ತ ತರುವಾಯ ನಿನ್ನ ಬಳಿಯಲ್ಲಿದ್ದು, ನಿನ್ನ ಮಹಿಮೆಯನ್ನು ನೋಡುವ ಹಾಗೆ, ನಮಗೆ ಅಪ್ಪಣೆ ಕೊಡು. ನಿನ್ನ ಪರಿಶುದ್ಧ ಜೀವವೂ ಪಾಪವಿಲ್ಲದವನಾದ ನೀನು ಅನುಭವಿಸಿದ ಶ್ರಮ ಮರಣವೂ ನ್ಯಾಯಪ್ರಮಾಣದ ಶಾಪಕ್ಕೂ ಬರುವ ಕೋಪಕ್ಕೂ ನಮ್ಮನ್ನು ತಪ್ಪಿಸಿ ರಕ್ಷಿಸುವಂಥ ನಮ್ಮ ನೀತಿಯಾಗಿರಲಿ! ಸಂಪೂರ್ಣನಾದ ಪ್ರಧಾನಯಾಜಕನೇ, ನಮ್ಮನ್ನೂ ನಮ್ಮ ಸಂಗಡ ಬೇಡಿಕೊಳ್ಳುವವರೆಲ್ಲರನ್ನೂ ನಿತ್ಯವಾಗಿ ನಿನ್ನ ಆಶೀರ್ವಾದದಿಂದ ಆಶೀರ್ವದಿಸಿ, ನಿನ್ನ ನಾಮದ ಮಹಿಮೆಗಾಗಿ ನಮಗೆ ನಿತ್ಯವಾದ ವಿಮೋಚನೆಯನ್ನುಂಟು ಮಾಡು! ಆಮೆನ್.

---

## ಶನಿವಾರದ ಮುಂಜಾನೆ.

ಅತ್ಯಂತ ಶುದ್ಧನೂ ಭಾಗ್ಯನೂ ಒಬ್ಬನೇ ಜ್ಞಾನಿಯೂ ಆಗಿರುವ ದೇವರೇ, ಮನುಷ್ಯರಾದ ನಮ್ಮ ಮೇಲೆಯೂ ನಿನ್ನ ಪ್ರಕಾಶವನ್ನು ಚೆಲ್ಲಿ ನಮಗೆ ಸೌಖ್ಯವನ್ನೂ ಜ್ಞಾನವನ್ನೂ ಕೊಡ ಮನಸ್ಸುಳ್ಳವನೇ! ಈ ವಾರದ ಕಡೇ ದಿವಸದಲ್ಲಿ ನಾವು ನಿನ್ನ ಸನ್ನಿಧಿಗೆ ಬರುತ್ತೇವೆ. ನೀನೇ ನಿಶ್ಚಯವಾಗಿ ಬೆಳಕಾಗಿರುತ್ತಿ, ನಿನ್ನಲ್ಲಿ ಕತ್ತಲೆ ಇಲ್ಲ. ಹೀಗಿರುವದರಿಂದ ಈಗ ಸಹಾ ನಿನ್ನ ಮುಖವನ್ನು ಕೃಪೆಯಾಗಿ ನಮ್ಮ ಮೇಲೆ ಪ್ರಕಾಶಿಸ ಮಾಡಿ, ನಾವು ಈ ದಿವಸದಲ್ಲಿ ಕತ್ತಲೆಯೊಳಗೆ ನಡಕೊಳ್ಳದೆ, ಇಲ್ಲಿ ಅಲ್ಲಿ ಎಡವಿ ಬೀಳದ ಹಾಗೆ, ಚಿಂತೆಗಳಿಂದಲೂ ಅಪನಂಬಿಗೆಯಿಂದಲೂ ನಮಗೆ ನಾವೇ ಉಪದ್ರ ಮಾಡದ ಹಾಗೆ, ನಮ್ಮ ಆತ್ಮಗಳಿಗೆ ಬೆಳಕನ್ನು ಕೊಡು. ನಾವು ನಡೆಯ ತಕ್ಕ ದಾರಿಯನ್ನು ನೀನು ನಮಗೆ ತೋರಿಸಿ, ಸತ್ಯವನ್ನು ಸತ್ಯವೆಂದೂ, ಸುಳ್ಳನ್ನು ಸುಳ್ಳೆಂದೂ, ನಮ್ಮ ಮನಸ್ಸಿಗೆ ಕಾಣಿಸ ಮಾಡು. ನಮಗೆ ಸಂಭವಿಸುವ ಎಲ್ಲಾ ಸಂಗತಿಗಳಲ್ಲಿ ಉತ್ತಮವಾದದ್ದೇನೆಂದು ನಾವು ತಿಳಿಯುವ ಹಾಗೆ, ನಮಗೆ ಬುದ್ಧಿ ಕೊಟ್ಟು, ಆ ಉತ್ತಮವಾದದ್ದನ್ನು ನಾವು, ಎಷ್ಟೂ ಮಾತ್ರ ತಡ ಮಾಡದೆ, ಆದು ಕೊಂಡು ನಡಿಸುವ ಹಾಗೆ, ನಮ್ಮ ಆತ್ಮಗಳನ್ನು ಬಲವಾಗಿ ಪ್ರೇರೇಪಿಸು. ಪರಲೋಕದೊಳಗಿರುವ ನಮ್ಮ ತಂದೆಯೇ, ನಿನ್ನ ಆತ್ಮದ ಮೂಲವಾಗಿ ನಿನ್ನ ಮಗನನ್ನು ನಮಗೆ ಪ್ರತ್ಯಕ್ಷ ಮಾಡು. ಕರ್ತನಾದ ಯೇಸುವೇ, ನಿನ್ನ ಆತ್ಮದ ಮೂಲವಾಗಿ ತಂದೆಯನ್ನು ನಮ್ಮಲ್ಲಿ ಪ್ರತ್ಯಕ್ಷ ಮಾಡು. ನಾವು ಈಗಲೇ ನಿತ್ಯಜೀವದ ಆರಂಭವನ್ನು ನಮ್ಮೊಳಗೆ ಹೊಂದಿ, ಈ ಲೋಕವನ್ನು ಬಿಟ್ಟ ಮೇಲೆ ನಿನ್ನ ಸಿಂಹಾಸನದ ಸಮೀಪಕ್ಕೆ ಶೇರಿ, ಪರಲೋಕದೊಳಗಿರುವ ನಿನ್ನ ಮಂದಿರದಲ್ಲಿ ಪ್ರವೇಶ ಮಾಡಿ, ಅದರೊಳಗೆ ನಿನ್ನ ಮಹಿಮೆಯನ್ನು ಮುಖಾಮುಖಿಯಾಗಿ ನೋಡಿ, ಎಲ್ಲಾ ಪರಿಶುದ್ಧರ ಸಂಗಡ ನಿನ್ನನ್ನು ಹೊಸ ರೀತಿಯಿಂದ ಆರಾಧಿಸುವ ಹಾಗೆ, ನಮ್ಮ

ನ್ನು ಸಿದ್ಧ ಮಾಡು. ಈ ವಾರದ ಕಡೇ ದಿವಸದಲ್ಲಿ ನಮ್ಮ ಜೀವದ ಕಡೇ ದಿವಸವು ನಮಗೆ ಜ್ಞಾಪಕವಾಗುತ್ತದೆ. ಅದು ಎಷ್ಟು ಸಮಿಾಪವೋ? ಎಷ್ಟು ದೂರವೋ? ಎಂದು ಅರಿಯೆವು. ಆ ದಿವಸದಲ್ಲಿಯೂ, ಕರ್ತನಾದ ಯೇಸುವೇ, ನೀನು ನಮ್ಮ ಜೀವದ ಬೆಳಕಾಗಿದ್ದು, ನಾವು ಅಜ್ಞಾನದ ಕತ್ತಲೆಯೊಳಗೆ ಸಾಯದ ಹಾಗೆಯೂ ಹೊರಗಿನ ಅಂಧಕಾರದಲ್ಲಿ ಬೀಳದ ಹಾಗೆಯೂ ನಮ್ಮನ್ನು ಕಾಪಾಡು. ನಿನ್ನ ಕೃಪೆಯ ಕ್ರಿಯೆಯನ್ನು ಈ ಹೊತ್ತೂ ಅಂತ್ಯದ ಪರ್ಯಂತರಕ್ಕೂ ನಮ್ಮಲ್ಲಿ ಮುಂದೆ ಮುಂದೆ ನಡಿಸು. ನಾವು ಅಜಾಗ್ರತೆಯಲ್ಲಿಯೂ ಮೈಗಳ್ಳತನದಲ್ಲಿಯೂ ಬೀಳುವ ಗಂಡಾಂತರ ಬಂದಾಗಲೇ, ಬಲವುಳ್ಳ ನಿನ್ನ ವಾಕ್ಯದಿಂದ ನಮ್ಮನ್ನು ಎಚ್ಚರಿಸು. ಉಪಯೋಗವಿಲ್ಲದ ಕೆಲಸಗಳಲ್ಲಿ ನಾವು ಶಿಕ್ಕಿ ಕೊಳ್ಳದ ಹಾಗೆ, ನಮ್ಮನ್ನು ಹಿಂದೆಳೆ. ಆದರೆ ನಿನ್ನ ಪ್ರಕಟಣೆಯೂ ನೀತಿಯುಳ್ಳ ನಿನ್ನ ನ್ಯಾಯತೀರ್ವಿಕೆಯೂ ಉಂಟಾಗುವ ದಿವಸದಲ್ಲಿ ನಮಗೆ ಸಂತೋಷಕ್ಕೆ ಕಾರಣವಾಗುವಂಥ ಕ್ರಿಯೆಗಳನ್ನು ಮಾಡುವದಕ್ಕೆ, ನಮಗೆ ಯಾವಾಗಲೂ ಬೆಳಕನ್ನೂ ಬಲವನ್ನೂ ಆಸ್ಪದವನ್ನೂ ದಯ ಪಾಲಿಸು! ಆಮೆನ್.

---

## ಶನಿವಾರದ ಸಂಜೆಗೆ.

ಕರುಣೆಯುಳ್ಳ ತಂದೆಯಾಗಿರುವ ದೇವರೇ! ಈ ಹಗಲೂ ವಾರವೂ ಮುಗಿದಿರಲಾಗಿ ನಾವು ನಿನ್ನ ಸನ್ನಿಧಾನಕ್ಕೆ ಬಂದು, ನಿನ್ನನ್ನು ಬೇಡಿ ಕೊಳ್ಳುವದೇನಂದರೆ—ನಾವು ನಿನ್ನ ಸಮಾಧಾನದಲ್ಲಿ ಮಲಗಿ, ಶಾಂತ ಹೃದಯದಿಂದ ನಿನ್ನ ಚಿತ್ತದ ಪ್ರಕಾರ ಹೊಸ ವಾರದಲ್ಲಿ ಶೇರುವ ಹಾಗೆ, ನೀನು ಯೇಸು ಕ್ರಿಸ್ತನ ರಕ್ತದಿಂದ ನಮ್ಮ ಆತ್ಮಗಳನ್ನು ಶುದ್ಧ ಮಾಡಿ, ನಮ್ಮ ಪಾಪವನ್ನೆಲ್ಲಾ ಮನ್ನಿಸ ಬೇಕು. ನಮ್ಮ ಜೀವವೆಲ್ಲಾ ತಪ್ಪುಗಳಿಂದಲೂ ದೋಷಗಳಿಂದಲೂ ತುಂಬಾಗಿದೆ. ನಾವು ನಿನ್ನ ಆಜ್ಞೆಗಳ ಪ್ರಕಾ

ರ ಕೆಲವು ಕ್ರಿಯೆಗಳನ್ನು ನಡಿಸಿದ್ದಾಗ್ಯೂ, ಅವು ಎಷ್ಟೂ ಮಾತ್ರ ಸಂಪೂರ್ಣತ್ವವೂ ಮಹಿಮೆಯೂ ಉಳ್ಳವುಗಳಲ್ಲಾ. ನಮ್ಮ ಆಲೋಚನೆ ಮಾತು ಕ್ರಿಯೆಗಳಲ್ಲಿ ಅನೇಕವು ಕೇವಲ ಕೆಟ್ಟವುಗಳೂ ಪಾಪಮಯವಾದವುಗಳೂ ಆಗಿವೆ. ನಮ್ಮಲ್ಲಿರುವಂಥ ಪಾಪಗಳನ್ನು ನಾವು ಪೂರ್ಣವಾಗಿ ತಿಳುಕೊಳ್ಳುವದಿಲ್ಲ. ನೀನು ಓ ದೇವರೇ, ನಮ್ಮನ್ನೂ ನಮ್ಮ ಜೀವವನ್ನೂ ಪೂರ್ಣವಾಗಿ ತಿಳುಕೊಳ್ಳುತ್ತಿ. ಹೀಗಿರುವದರಿಂದ ನಾವು ನಿನ್ನ ಕಣ್ಣುಗಳ ಮುಂದೆ ಎಷ್ಟೋ ಅಶುದ್ಧರೂ ಅಸಹ್ಯವಾದವರೂ ಆಗಿರ ಬೇಕು! ಆದಾಗ್ಯೂ ನೀನು ಕೃಪೆಯೂ ತಾಳ್ಮೆಯೂ ಮಹಾ ದಯವೂ ನಂಬಿಗೆಯೂ ಉಳ್ಳವನಾಗಿದ್ದು, ನಿನ್ನ ಬಳಿಯಲ್ಲಿ ನಮಗೆ ಒಬ್ಬ ಕಾರ್ಯಕರ್ತನು ಇರುವದರಿಂದ ಈತನ ಬಿನ್ನಹಗಳನ್ನು ಆಲೈಸಿ, ನಮಗೆ ಕ್ಷೇಮ ಸಮಾಧಾನಗಳನ್ನು ಕೊಡುತ್ತಿ. ಈ ಕಾರ್ಯಕರ್ತನು ಯಾರಂದರೆ—ನಿನ್ನ ಮಗನಾದ ಯೇಸು ಕ್ರಿಸ್ತನು! ಈತನು ನೀತಿಯುಳ್ಳವನಾಗಿದ್ದು, ನಮ್ಮ ಪಾಪಗಳಿಗೂ ಸಮಸ್ತ ಲೋಕದವುಗಳಿಗೂ ಪ್ರಾಯಶ್ಚಿತ್ತವಾದ ಬಲಿಯಾಗಿದ್ದಾನೆ. ಆದದರಿಂದ ಈ ನಿನ್ನ ಮಗನ ಹೆಸರಿನಲ್ಲಿ ನಾವು ಪರಲೋಕದಲ್ಲಿರುವ ತಂದೆಯಾದ ನಿನ್ನನ್ನು ಬೇಡಿ ಕೊಳ್ಳುವದೇನಂದರೆ—ನಮ್ಮ ಪಾಪಗಳನ್ನು ಮನ್ನಿಸಿ, ಪಾಪದ ಮೈಲಿಗೆಯನ್ನೆಲ್ಲಾ ತೆಗದು ಹಾಕಿ, ನಮ್ಮ ಆತ್ಮಗಳನ್ನು ಶುದ್ಧ ಮಾಡು. ಇದಲ್ಲದೆ ನೀನು ನಮ್ಮ ಹೃದಯಗಳನ್ನು ನಿನ್ನ ಪ್ರೀತಿಯಿಂದ ತುಂಬಿ, ನಾವು ನಿನಗೆ ಅಂಟಿ ಕೊಳ್ಳುವ ಹಾಗೆಯೂ, ನಿನ್ನ ಆಜ್ಞೆಗಳನ್ನು ಮನಃಪೂರ್ವಕವಾಗಿ ಕೈಕೊಳ್ಳುವ ಹಾಗೆಯೂ, ನಮ್ಮನ್ನು ಸಿದ್ಧ ಮಾಡ ಬೇಕೆಂದು, ಬೇಡಿ ಕೊಳ್ಳುತ್ತೇವೆ. ನಮಗೆ ಯಾರೂ ಏನಾದರೂ ಕೇಡು ಮಾಡಿದ್ದಾದರೆ; ಅದನ್ನು ಮಾಡಿದವರ ವಿಷಯದಲ್ಲಿ ಏನಾದರೂ ಹಗೆಯೂ ಮುಯ್ಯಿಗೆ ಮುಯ್ಯಿ ತೀರಿಸುವ ಮನಸ್ಸೂ ಉಳಿಯದ ಹಾಗೆ, ನಮಗೆ ಆದ ಅನ್ಯಾಯಗಳ ಜ್ಞಾಪಕವನ್ನು ನಮ್ಮ ಹೃದಯಗಳೊಳಗಿಂದ ಅಳಿಸಿ ಬಿಡು. ಈ ಲೋಕದಲ್ಲಿ

ಆಗುವ ಶ್ರಮೆಗಳೆಲ್ಲಾ ನಮ್ಮ ಉಪಯೋಗಕ್ಕೆ ಆಗುತ್ತವೆ ಎಂದೂ, ನಿನ್ನ ಅಪ್ಪಣೆ ಇಲ್ಲದ್ದಾಗಿ ನಮಗೆ ಯಾವನಾಗಲಿ ಕೇಡು ಮಾಡಲಾರನೆಂದೂ, ನಮಗೆ ತಿಳಿಸು. ಇದಲ್ಲದೆ ನಿನ್ನ ಪ್ರಿಯ ಮಗನು ತಾಳಿದ ಶ್ರಮೆಗಳಲ್ಲಿ ನಾವು ಪಾಲುಗಾರರಾಗ ಬೇಕಾದರೆ, ಆತನ ತಾಳ್ಮೆ ಪ್ರೀತಿ ದೀರ್ಘಶಾಂತಿಗಳಲ್ಲಿಯೂ ನಮಗೆ ಪಾಲು ಕೊಡು. ಮತ್ತು ಆತನು ಹ್ಯಾಗೆ ಈಗ ನಿನ್ನ ಬಲಪಾರ್ಶ್ವದಲ್ಲಿರುವ ಸಂಪೂರ್ಣವಾದ ಸಂತೋಷವನ್ನೂ ಆನಂದವನ್ನೂ ಅನುಭವಿಸುತ್ತಾನೋ, ಹಾಗೆಯೇ ನಮ್ಮನ್ನು ಸಹಾ ಕಡೆಯಲ್ಲಿ ನಿನ್ನ ವಿಶ್ರಾಂತಿಯಲ್ಲಿಯೂ ಸಂತೋಷದಲ್ಲಿಯೂ ಶೇರಿಸು! ಆಮೆನ್.

---

## ಎರಡನೇ ವಾರದ

# ಪ್ರಾರ್ಥನೆಗಳು.

### ಆದಿತ್ಯವಾರದ ಮುಂಜಾನೆ.

ಕರುಣೆಯುಳ್ಳ ದೇವರೇ, ಪರಲೋಕದಲ್ಲಿರುವ ತಂದೆಯೇ! ಈ ನಿನಗೆ ಪರಿಶುದ್ಧವಾದಂಥ ದಿವಸದಲ್ಲಿ ನಾವು ನಿನ್ನ ಸನ್ನಿಧಿಗೆ ಬಂದು, ಈ ದಿವಸದಲ್ಲಿ ನಮಗೆ ಆಶೀರ್ವಾದವನ್ನೂ ಕೃಪೆಯನ್ನೂ ಕೊಡ ಬೇಕೆಂದು ಬೇಡಿಕೊಂಡು, ನೀನು ನಮ್ಮಲ್ಲಿ ಮಾಡುವಂಥ ಎಲ್ಲಾ ಉಪಕಾರಗಳ ವಿಷಯಕ್ಕೆ ನಿನಗೆ ಸ್ತುತಿಸ್ತೋತ್ರ ಮಾಡುತ್ತೇವೆ. ನೀನು ಆರು ದಿವಸದಲ್ಲಿ ಭೂಲೋಕವನ್ನು ನಿರ್ಮಿಸಿದ ಮೇಲೆ ಏಳನೇದರಲ್ಲಿ ವಿಶ್ರಮಿಸಿ ಕೊಂಡ ಪ್ರಕಾರ, ನಮಗೂ ಏಳನೇ ದಿವಸವನ್ನು ವಿಶ್ರಾಂತಿಯ ದಿವಸವಾಗಿ ನೇಮಿಸಿದ್ಧಿ. ಆದಿ

ತ್ಯವಾರದಲ್ಲಿ ನೀನು ಲೋಕದ ಬೆಳಕಾಗಿಯೂ ನಮ್ಮ ಕರ್ತನಾಗಿಯೂ ಬಂದ ನಿನ್ನ ಮಗನಾದ ಯೇಸು ಕ್ರಿಸ್ತನನ್ನು ಸತ್ತವರೊಳಗಿಂದ ಹೊರ ತಂದು, ನಿತ್ಯಜೀವವನ್ನೂ ಕೃಪೆಯನ್ನೂ ಸಮಾಧಾನವನ್ನೂ ಪರಿಶುದ್ಧಾತ್ಮದ ಮೂಲವಾಗಿ ನಂಬುವವರಿಗೆ ಹಂಚಿ ಕೊಡುವದಕ್ಕಾಗಿ ಆತನಿಗೆ ಎಲ್ಲಾ ಮಾಂಸದ ಮೇಲೆ ಅಧಿಕಾರ ಕೊಟ್ಟೆ. ಕರುಣೆಯುಳ್ಳ ದೇವರೇ, ಮಹಿಮೆಯುಳ್ಳ ಈ ದಿವಸವು ನಮಗೆ ವಿಶ್ರಾಂತಿಯ ದಿವಸವೂ ಆಶೀರ್ವಾದದ ದಿವಸವೂ ಆಗುವ ಹಾಗೆ ಮಾಡು. ಇಂದು ನಾವು ಆತ್ಮದ ಪ್ರಕಾರ ಪುನರುತ್ಥಾನ ಹೊಂದಿ, ಹೊಸ ಜೀವದಲ್ಲಿ ನಡಕೊಳ್ಳುವ ಹಾಗೆ, ನಮಗೆ ಸಹಾಯ ಮಾಡು. ಸಮಸ್ತ ಲೋಕದ ಮೇಲೆ ಉದಯವಾದಂಥ ನೀತಿಯ ಸೂರ್ಯನೂ ಉನ್ನತದಿಂದಾಗುವ ಉದಯವೂ ನಮಗೆ ಪ್ರಕಾಶವನ್ನೂ ಬೆಳಕನ್ನೂ ಜೀವವನ್ನೂ ಕೊಡುವದರಿಂದ, ಈ ದಿವಸವು ನಮಗೆ ನಿಜ ಆದಿತ್ಯವಾರವಾಗಲಿ! ವಿಶ್ರಾಂತಿಯ ಮೇಲೆ ನಿಜವಾದ ಅಪೇಕ್ಷೆಯನ್ನು ನಮ್ಮಲ್ಲಿ ಹುಟ್ಟಿಸು. ಕಳದ ಸಪ್ತಕದಲ್ಲಿ ನಮ್ಮ ಆತ್ಮಗಳಲ್ಲಿ ಯಾವದೊಂದೂ ಭ್ರಮೆ ಹುಟ್ಟಿದ್ದಾದರೆ, ಅದನ್ನು ಬಿಡಿಸಿ, ಪ್ರಪಂಚದ ಆಲೋಚನೆಗಳನ್ನೆಲ್ಲಾ ನಮಗೆ ದೂರ ಮಾಡು. ಮತ್ತು ನಮ್ಮ ದೇಹವು ವಿಶ್ರಾಂತಿಯಾಗಿರುವ ವೇಳೆಯಲ್ಲಿ ಒಳಗಿನ ಮನುಷ್ಯನು ಎಚ್ಚರಿಕೆಯಾಗಿದ್ದು, ಬೆಳಕನ್ನೂ ವಿಶ್ರಾಂತಿಯನ್ನೂ ಹೊಂದುವ ಹಾಗೆ, ನಮಗೆ ದಯಮಾಡು. ಜೀವ ಸಮಾಧಾನಗಳ ಅರಸನಾಗಿರುವ ಕರ್ತನಾದ ಯೇಸುವೇ, ಈ ದಿವಸದಲ್ಲಿ ನೀನು ಚಿನ್ನದ ಏಳು ದೀಪಸ್ತಂಭಗಳ ಮಧ್ಯದಲ್ಲಿ ಸಂಚಾರ ಮಾಡುವವನಾಗಿ, ಕಾಣಿಸಿ ಕೊಂಡಿಯಲ್ಲಾ? ಈ ದಿವಸದಲ್ಲಿ ವಿಶೇಷವಾಗಿ ಮನುಷ್ಯರ ಹೃದಯವೆಂಬ ಬಾಗಲಿನ ಮುಂದೆ ನಿಂತು, ತಟ್ಟಿ ಯಾರಾದರೂ ನಿನ್ನ ಶಬ್ದವನ್ನು ಕೇಳಿ ತೆರೆಯುತ್ತಾರೇನೋ? ನೋಡುತ್ತಿ. ಹೀಗಿರುವದರಿಂದ ನೀನು ನಮ್ಮಲ್ಲಿ ಸಂಚಾರ ಮಾಡಿ, ನಮ್ಮ ಬಾಗಲಲ್ಲಿ ತಟ್ಟಿ, ನಮ್ಮ ಹೃದಯಗಳಲ್ಲಿ ಪ್ರವೇಶ ಮಾಡಿ, ನಮ್ಮನ್ನು ಸತ್ಯವಾಗಿ

ನಿನ್ನ ಐಕ್ಯದಲ್ಲಿ ಶೇರಿಸು. ಈ ದಿವಸದಲ್ಲಿ ಭಕ್ತರು ಎಲ್ಲೆಲ್ಲಿ ನಿನ್ನ ಪರಿಶುದ್ಧ ಹೆಸರಿನಲ್ಲಿ ಕೂಡಿ ಬರುತ್ತಾರೋ, ಅಲ್ಲಲ್ಲೇ ನೀನು ಅವರ ಮಧ್ಯದಲ್ಲಿದ್ದು, ನಿನ್ನ ಸಾಮಿಾಪ್ಯದಿಂದ ನಿನ್ನ ವಾಕ್ಯಕ್ಕೆ ಆಶೀರ್ವಾದ ಕೊಡು. ನಿನ್ನ ವಾಕ್ಯವನ್ನು ಪ್ರಸಂಗಿಸುವವರ ಮೇಲೆಯೂ ಕೇಳುವವರ ಮೇಲೆಯೂ ನಿನ್ನ ಆಶೀರ್ವಾದವನ್ನು ಹೊಯಿದು, ಜೀವವನ್ನೂ ಪೂರ್ಣ ಸಂತೃಪ್ತಿಯನ್ನೂ ಕೊಡುವಂಥ ಮೇವು ಎಲ್ಲಾ ಕಡೆಯಲ್ಲಿಯೂ ಆತ್ಮಗಳಿಗೆ ಶಿಕ್ಕುವ ಹಾಗೆ, ಮಾಡು. ನಿನ್ನ ರಾಜ್ಯವು ಬರಲಿ! ಭೂಲೋಕದಲ್ಲೆಲ್ಲಾ ಅದನ್ನು ವಿಸ್ತಾರ ಮಾಡು. ಯೇಸು ಎಂಬ ನಿನ್ನ ಪ್ರಿಯ ಹೆಸರು ಮನುಷ್ಯರೆಲ್ಲರಿಗೆ ತಿಳಿಯುವ ಹಾಗೆಯೂ, ಸಮುದ್ರದ ನೆಲವನ್ನು ನೀರು ಮುಚ್ಚುವ ಪ್ರಕಾರ ಭೂಮಿಯನ್ನೆಲ್ಲ ನಿನ್ನ ಜ್ಞಾನವು ಮುಚ್ಚುವ ಹಾಗೆಯೂ, ಮಾಡು. ಕ್ರೈಸ್ತಮತವನ್ನು ಅನುಸರಿಸಿ ನಿನ್ನ ಸಭೆಗೆ ಆಶ್ರಯ ಕೊಡುವಂಥ ಅಧಿಕಾರಸ್ಥರೆಲ್ಲರನ್ನು ಆಶೀರ್ವದಿಸು. ಮುಖ್ಯವಾಗಿ ಈ ದೇಶದಲ್ಲಿ ನಿನ್ನ ಸಭೆಯು ಸಮಾಧಾನವಾಗಿ ಕಟ್ಟಿಸಿ ಕೊಳ್ಳುವ ಹಾಗೆಯೂ, ನಿನ್ನ ವಾಕ್ಯವು ಅಡ್ಡಿ ಇಲ್ಲದೆ ನಡಿಯುವ ಹಾಗೆಯೂ ಸಹಾಯ ಮಾಡಿ, ಈ ದೇಶದ ಅಧಿಕಾರಸ್ಥರನ್ನು ಅದಕ್ಕಾಗಿ ಅನುಕೂಲ ಮಾಡು. ಈ ಜೀವದ ರೊಟ್ಟಿಯನ್ನು ಕಷ್ಟ ಮಾಡಿ ಸಂಪಾದಿಸುವದಕ್ಕೆ, ನೀನು ನಮಗೆ ಆರು ದಿವಸಗಳನ್ನು ನೇಮಿಸಿದ್ಧಿ. ಆದರೆ ಈ ಹೊತ್ತು ನೀನು ಮರೆಯಾದ ಮನ್ನವೂ ನಿತ್ಯಜೀವಕ್ಕಾಗಿ ನೆಲೆಯಾಗಿರುವ ನಿರ್ಲಯವಾದ ಆಹಾರವೂ ಆದಂಥ ಜೀವದ ರೊಟ್ಟಿಯನ್ನು ನಮಗೆ ಕಳುಹಿ ಕೊಡುತ್ತಿ. ಜೀವದ ರೊಟ್ಟಿಯಾಗಿರುವ ನಿನ್ನ ವಾಕ್ಯದ ಮೇಲೆ ಸತ್ಯ ಹಸಿವೆಯನ್ನು ನಮ್ಮಲ್ಲಿ ಹುಟ್ಟಿಸಿ, ನಮಗೆ ಈ ಹೊತ್ತು ತೃಪ್ತಿ ಮಾಡಿ, ಬಲವನ್ನು ಕೊಡು. ಪರಲೋಕ ಸಂಬಂಧವಾದ ಈ ಆಹಾರದ ಬಲದಿಂದ ನಾವು ಈ ಹೊತ್ತು ಆರಂಭಿಸಿದ ಸಪ್ತಕದಲ್ಲಿ ನಡಕೊಂಡು, ಪಾಪವನ್ನೂ ಲೋಕವನ್ನೂ ಜೈಸಿ, ನಿನ್ನ ಆಜ್ಞೆಗಳನ್ನು ಕೈಕೊಂಡು, ನಿನ್ನ ಐಕ್ಯದಲ್ಲಿ ನೆಲೆಯಾಗಿರುವ ಹಾಗೆ

ಯೂ, ಮತ್ತು ಈ ಜೀವದ ಮಾರ್ಗವನ್ನು ಹಿಡಿದು, ಕಡೆಯಲ್ಲಿ ಪರಲೋಕದಲ್ಲಿರುವ ನಮ್ಮ ಸ್ವಂತ ನಿವಾಸಕ್ಕೆ ಶೇರುವ ಹಾಗೆಯೂ, ನಮಗೆ ಸಹಾಯ ಮಾಡು. ಕರುಣೆಯುಳ್ಳ ತಂದೆಯಾದ ದೇವರೇ, ನಿನ್ನ ಪ್ರಿಯ ಮಗನಾದ ಯೇಸು ಕ್ರಿಸ್ತನಿಗಾಗಿ, ಪರಿಶುದ್ಧಾತ್ಮದಿಂದ ನಮ್ಮ ಬಿನ್ನಹಗಳನ್ನು ಪೂರೈಸು! ಆಮೆನ್.

---

## ಆದಿತ್ಯವಾರದ ಸಂಜೆಗೆ.

ನಮ್ಮಲ್ಲಿ ಒಬ್ಬನಾದರೂ ನಾಶವಾಗ ಬೇಕೆಂದು ಮನಸ್ಸು ಮಾಡದೆ, ನಮಗೆ ಪ್ರೀತಿ ಮಾಡಿದ ನಮ್ಮ ಕರ್ತನಾದ ದೇವರೇ, ನಮ್ಮ ಕರ್ತನಾದ ಯೇಸು ಕ್ರಿಸ್ತನ ತಂದೆಯೇ! ಈ ವಿಶ್ರಾಂತಿ ದಿವಸದ ಸಾಯಂಕಾಲದಲ್ಲಿ ನಾವು ಇನ್ನೊಮ್ಮೆ ನಿನ್ನ ಪರಿಶುದ್ಧ ಸನ್ನಿಧಿಗೆ ಬಂದು, ನೀನು ಈ ದಿವಸದಲ್ಲಿ ನಿನ್ನ ವಾಕ್ಯದಿಂದಲೂ ನಿನ್ನ ಆತ್ಮದಿಂದಲೂ ನಮಗೆ ಮಾಡಿದ ಕೃಪೆಯ ವಿಷಯವಾಗಿ ನಿನ್ನ ಮುಂದೆ ಧ್ಯಾನ ಮಾಡುತ್ತೇವೆ. ನೀನು ನಮಗೆ ಮಾಡುವ ಎಲ್ಲಾ ಕೃಪೆಯ ಸಲವಾಗಿಯೂ, ಈ ಹೊತ್ತು ಮಾಡಿದದರ ಸಲವಾಗಿಯೂ, ನಿನಗೆ ಸ್ತುತಿ ಸ್ತೋತ್ರವಾಗಲಿ! ವಿಗ್ರಹಾರಾಧನೆಯ ಅಜ್ಞಾನದಲ್ಲಿ ನಮ್ಮನ್ನು ಬಿಟ್ಟು ಬಿಡದೆ, ನಿನ್ನ ವಾಕ್ಯದಿಂದ ನಿನ್ನ ಪರಿಶುದ್ಧ ನಾಮವನ್ನೂ ನಮ್ಮ ವಿಷಯದಲ್ಲಿ ನೀನು ಮಾಡಿದ ಸಮಾಧಾನದ ಆಲೋಚನೆಗಳನ್ನೂ ನಮಗೆ ತಿಳಿಸಿದ್ದು ಎಷ್ಟೋ ಉಪಕಾರ! ಅಂಧಕಾರವಾದ ನಮ್ಮ ಹೃದಯಗಳಲ್ಲಿ ನಿನ್ನ ಪರಿಶುದ್ಧಾತ್ಮದ ಬೆಳಕನ್ನು ಹೊಯಿದು, ನಾವು ನಮ್ಮ ಗುಣ ಭಾವಗಳನ್ನೂ ನಮ್ಮ ಪಾಪಗಳನ್ನೂ ಪಾಪದಿಂದ ಬಂದ ಕಷ್ಟಗಳನ್ನೂ ಪಾಪದೊಳಗಿಂದ ರಕ್ಷಿಸುವ ಯೇಸು ಕ್ರಿಸ್ತನನ್ನೂ ನೆಟ್ಟಗೆ ತಿಳಿಯುವ ಹಾಗೆ, ಸಹಾಯವ ಮಾಡು. ಈ ಹೊತ್ತು ನಮ್ಮ ಹೃದಯಗಳಲ್ಲಿ ಬಿದ್ದ ಸತ್ಯ ವಾಕ್ಯವೆಂಬ ಜೀವವುಳ್ಳ ಬೀಜವನ್ನು ಕೃಪೆಯಾಗಿ ಕಾಪಾಡು. ಅದರಿಂದ ತಕ್ಕ ಫಲ ಉಂಟಾಗುವ ಹಾಗೆ, ಸಹಾಯ ಮಾಡು. ಈ ರಾತ್ರಿಯಲ್ಲಿ ನಾವು ಎಚ್ಚರವಾದರೆ,

ಈ ಹೊತ್ತು ಕೇಳಿದ ಮಾತನ್ನು ಆಲೋಚಿಸುವ ಹಾಗೆ, ನಮಗೆ ಬುದ್ಧಿ ಕೊಡು. ದುರಾತ್ಮಗಳ ಮೋಸಗಳೂ ಮುಂತಾದ ಕೇಡೆಲ್ಲವೂ ನಮಗೆ ದೂರವಾಗಿರಲಿ! ನಾವು ಈ ಹೊತ್ತು ಮಾಡಿದ ಎಲ್ಲಾ ಪಾಪಗಳನ್ನೂ ನಿನ್ನ ವಾಕ್ಯದ ವಿಷಯವಾದ ಅಜಾಗ್ರತೆಯನ್ನೂ ಮನ್ನಿಸು. ಸತ್ಯ ಪಶ್ಚಾತ್ತಾಪವನ್ನು ನಮ್ಮಲ್ಲಿ ಹುಟ್ಟಿಸಿ, ನಿನ್ನ ಕೃಪೆಯನ್ನೂ ಆತ್ಮದ ಹೊಸ ಜೀವವನ್ನೂ ನಮಗೆ ದಯ ಪಾಲಿಸು. ನಿನ್ನ ಸತ್ಯದಿಂದಲೂ ನಿನ್ನ ಪರಿಶುದ್ಧಾತ್ಮದಿಂದಲೂ ನಮ್ಮನ್ನು ಪರಿಶುದ್ಧರನ್ನೂ ಹೊಸಬರನ್ನೂ ಮಾಡಿ, ಆಳುಗಳ ಭಯವನ್ನೆಲ್ಲಾ ನಮ್ಮಿಂದ ಹೊರಡಿಸಿ, ನಾವು ಮನಃಪೂರ್ವಕವಾಗಿ ಆತ್ಮದಿಂದ ನಿನಗೆ ಸೇವೆ ಮಾಡಿ, ನಿನ್ನ ಚಿತ್ತದ ಪ್ರಕಾರ ಸಂತೋಷವಾಗಿ ಬದುಕುವ ಹಾಗೆ, ನಮಗೆ ಸಹಾಯ ಮಾಡು. ಕಳದು ಹೋದ ಮಹಿಮೆಯನ್ನು ತಿರಿಗಿ ಹೊಂದುವದಕ್ಕಾಗಿಯೂ, ನಿನ್ನ ಹೋಲ್ವಿಕೆಗೆ ತಿರಿಗಿ ಸಮಾನರಾಗುವದಕ್ಕಾಗಿಯೂ, ಈ ಲೋಕದಲ್ಲಿ ಬದುಕುವ ಘನವಾದ ಕಾರ್ಯವು ನಮ್ಮಲ್ಲಿ ಸಫಲವಾಗುವ ಹಾಗೆಯೂ, ನಾವು ಇಹಜೀವದ ಅಂತ್ಯದಲ್ಲಿ ನಿನ್ನ ವಿಶ್ರಾಂತಿ ಮಹಿಮೆಗಳಲ್ಲಿ ಶೇರುವ ಹಾಗೆಯೂ, ನೀನು ನಮ್ಮ ಸಂಚಾರಗಳನ್ನು ಆಶೀರ್ವದಿಸು. ಶರೀರಾತ್ಮಗಳ ಸಹಿತವಾಗಿ ನಮ್ಮನ್ನೂ ನಮ್ಮ ಹಾಗೆ ನಿನ್ನ ಜನರೆಲ್ಲರನ್ನೂ ಯೇಸು ಕ್ರಿಸ್ತನಿಗಾಗಿ ಪರಿಶುದ್ಧಾತ್ಮದ ಮೂಲವಾಗಿ ನಿನ್ನ ಆಶ್ರಯದಲ್ಲಿಟ್ಟು, ಕಾಪಾಡಿ, ಆಶೀರ್ವದಿಸು. ಸಭೆಯವರೆಲ್ಲರ ಮೇಲೆಯೂ ಮನುಷ್ಯರೆಲ್ಲರ ಮೇಲೆಯೂ ನಿನ್ನ ಕರುಣೆ ಎಂಬ ರೆಕ್ಕೆಗಳನ್ನು ಚಾಚಿ, ಮುಖ್ಯವಾಗಿ ಎಲ್ಲಾ ರೋಗಿಷ್ಠರನ್ನೂ ಶ್ರಮೆಯಲ್ಲಿರುವವರನ್ನೂ ನೆನಸಿ ಕೊಂಡು, ಅವರಿಗೆ ತಾಳ್ಮೆಯನ್ನೂ ಶಾಂತಿಯನ್ನೂ ಕೊಟ್ಟು, ಅವರ ವಿಷಯವಾದ ನಿನ್ನ ಪರಿಶುದ್ಧ ಆಲೋಚನೆಯನ್ನು ತೀರಿಸಿ, ತಕ್ಕ ಕಾಲದಲ್ಲಿ ಅವರ ಶ್ರಮೆಗಳನ್ನು ಪರಿಹರಿಸು. ಕಡೆಯಲ್ಲಿ, ಈ ಜೀವವೆಂಬ ಪ್ರಯಾಣ ಮುಗಿದ ಮೇಲೆ, ನಮ್ಮೆಲ್ಲರನ್ನು ಸತ್ಯ ವಿಶ್ರಾಂತಿಯ ದೇಶದಲ್ಲಿ ಶೇರಿಸು! ಆಮೆನ್.

---

## ಸೋಮವಾರದ ಮುಂಜಾನೆ.

ಕರ್ತನಾದ ದೇವರೇ, ಪರಲೋಕದಲ್ಲಿರುವ ತಂದೆಯೇ! ನಾವು ಈ ಹೊತ್ತು ನಮ್ಮ ಕೆಲಸಗಳನ್ನು ತಿರಿಗಿ ಆರಂಭಿಸುವದಕ್ಕಿಂತ ಮುಂಚೆ ನಿನ್ನ ಪರಿಶುದ್ಧ ಸನ್ನಿಧಿಗೆ ಬಂದು, ನಿನ್ನ ಆಶೀರ್ವಾದವನ್ನು ಬೇಡಿ ಕೊಳ್ಳುತ್ತೇವೆ. ನೀನು ಹೋದ ರಾತ್ರಿಯಲ್ಲಿ ನಮ್ಮನ್ನು ಕಾಪಾಡಿ, ನಮಗೆ ಬಲ ಕೊಟ್ಟು, ನಮ್ಮನ್ನು ಶರೀರಸ್ವಸ್ಥದಲ್ಲಿಯೂ ಹೊಸ ಶಕ್ತಿಯಲ್ಲಿಯೂ ಈ ಹೊಸ ದಿನವನ್ನು ನೋಡಗೊಡಿಸಿದದರಿಂದ, ನಿನಗೆ ಸ್ತೋತ್ರ ಮಾಡುತ್ತೇವೆ. ಐಯ್ಯೋ! ನಮ್ಮ ಮೂಲ ತಂದೆತಾಯಿಗಳು ಪಾಪದಲ್ಲಿ ಬಿದ್ದು ಕೆಟ್ಟು ಹೋದದರಿಂದ, ನಾವು ಸಹಾ ಈಗಲೇ ಕಷ್ಟ ಮಾಡಿ, ಹಣೆಯ ಬೆವರು ಹಾಕಿ, ನಮ್ಮ ರೊಟ್ಟಿಯನ್ನು ತಿನ್ನಬೇಕು. ನಾವು ನಮ್ಮ ಪಾಪಗಳನ್ನೂ ನಾವು ಬಿದ್ದ ಕಷ್ಟವನ್ನೂ ನೆಟ್ಟಗೆ ತಿಳಿಯುವ ಹಾಗೆ, ನಿನ್ನ ಪರಿಶುದ್ಧ ಬೆಳಕನ್ನು ನಮ್ಮ ಮೇಲೆ ಹೊಯಿದು, ಸತ್ಯ ಪಶ್ಚಾತ್ತಾಪವನ್ನೂ ದುಃಖದಿಂದ ಮುರಿದ ಹೃದಯಗಳನ್ನೂ ನಮಗೆ ಕೊಡು. ನಮ್ಮ ಪಾಪಗಳನ್ನೆಲ್ಲಾ ನಿನ್ನ ಒಬ್ಬನೇ ಮಗನಾಗಿರುವ ಯೇಸು ಕ್ರಿಸ್ತನ ರಕ್ತಕ್ಕಾಗಿ ಮನ್ನಿಸಿ, ನಮ್ಮ ಅಪರಾಧಗಳನ್ನೆಲ್ಲಾ ಪರಿಹರಿಸಿ, ನಾವು ಶುದ್ಧರಾಗುವ ಹಾಗೆ ನಮ್ಮನ್ನು ತೊಳೆದು ಬಿಡು. ನೀನು ನಮಗೆ ನೇಮಿಸಿದ ಕೆಲಸಗಳನ್ನು ನಾವು ನಂಬಿಗೆಯಾಗಿಯೂ ಸಂತೋಷವಾಗಿಯೂ ಮಾಡುವ ಹಾಗೆ, ನಮ್ಮನ್ನು ಆಶೀರ್ವದಿಸು. ನಾವು ಮಾಡುವ ಕೆಲಸಗಳಿಂದಾಗಲಿ ತಾಳುವ ಶ್ರಮೆಗಳಿಂದಾಗಲಿ ನಿನ್ನ ಪರಿಶುದ್ಧ ಚಿತ್ತ ಉಂಟಾಗ ಬೇಕೆಂದೂ, ನಾವು ಮಾಡುವ ಸೇವೆ ಎಲ್ಲಾ ನಿನಗೆ ಆಗುವಂಥಾದ್ದೆಂದೂ, ತಿಳುಕೊಳ್ಳುವದಕ್ಕೆ ನಮಗೆ ಬುದ್ಧಿ ಕೊಡು. ಪರಿಶುದ್ಧ ನಿನ್ನ ದೃಷ್ಟಿಯನ್ನು ನಮ್ಮ ಮೇಲೆ ಇಟ್ಟು, ನಾವು ಪಾಪದಲ್ಲಿಯಾದರೂ ಈ ಲೋಕದ ಭ್ರಮೆಯಲ್ಲಿಯಾದರೂ ಬೀಳದ ಹಾಗೆ, ನಮ್ಮನ್ನು ಕಾಪಾಡಿ, ನಿನ್ನ ಸಮಾಧಾನವನ್ನು ನಮ್ಮಲ್ಲಿ ನೆಲೆಗೊಳ್ಳಿಸಿ, ನಮ್ಮ ಹೃದಯಗಳನ್ನು

ನಿನ್ನ ಸಂಗಡ ಅನ್ಯೋನ್ಯವಾಗ ಮಾಡು. ನಮಗೆ ಪ್ರಿಯರಾದ ವರೆಲ್ಲರನ್ನು, ಸಮೀಪದಲ್ಲಿಯಾಗಲಿ ದೂರದಲ್ಲಿಯಾಗಲಿ ಇರುವವರನ್ನು, ಶರೀರಾತ್ಮಗಳಿಂದ ಬರುವ ಎಲ್ಲಾ ಗಂಡಾಂತರಗಳಿಗೆ ತಪ್ಪಿಸು. ನಿನ್ನ ಆಶೀರ್ವಾದವೇ ಮುಖ್ಯವಾದದ್ದು; ನೀನು ನಮ್ಮ ಎಲ್ಲಾ ಕೆಲಸಗಳನ್ನೂ ನಡೆನುಡಿಗಳನ್ನೂ ಆಶೀರ್ವದಿಸು. ಮತ್ತು ನಮ್ಮ ಶರೀರಗಳಿಗೆ ಅಗತ್ಯವಾದವುಗಳನ್ನು, ನಮಗೆ ಕೊಟ್ಟ ವಚನದ ಪ್ರಕಾರ, ದಯ ಪಾಲಿಸು. ಆದರೆ ಒಂದೇ ಅಗತ್ಯವಾದದ್ದೆಂದು, ನಿನ್ನ ರಾಜ್ಯವನ್ನೂ ಅದರ ನೀತಿಯನ್ನೂ ಮುಖ್ಯವಾಗಿ ಚಿಂತಿಸುವದಕ್ಕೆ, ನಮಗೆ ಬುದ್ಧಿ ಕೊಡು. ನಿನ್ನ ರಾಜ್ಯದ ಪಾಲುಗಾರರಿಗೂ ನಿನಗೆ ವಿಧೇಯವಾದ ಪ್ರಜೆಗಳಿಗೂ ಯೋಗ್ಯವಾದ ತೆರದಿಂದ ಇಂದಿನ ದಿವಸವನ್ನು ಕಳೆಯ ಬೇಕೆಂದು, ಇಚ್ಛೈಸುತ್ತೇವೆ. ನಿನ್ನಿಂದುಂಟಾಗುವಂಥ, ನಿನ್ನ ಮುಂದೆ ಸಮರ್ಪಕವಾಗಿರುವಂಥ, ನೀತಿಯು ಹೆಚ್ಚು ಹೆಚ್ಚಾಗಿ ನಮಗೆ ಶಿಕ್ಕಲಿ! ನಮಗಲ್ಲ, ನಮಗಾಗಿ ಸತ್ತು ಎದ್ದವನಿಗೆ ಬದುಕುವ ಕೃಪೆಯನ್ನು ನಮಗೆ ಕೊಡು. ಆತನು ಇದ್ದ ಪ್ರಕಾರ ನಾವೂ ಈ ಲೋಕದಲ್ಲಿರ ಬೇಕೆಂದು, ಮತ್ತೊಬ್ಬರಿಂದ ಸೇವೆ ತಕ್ಕೊಳ್ಳದೆ, ಮತ್ತೊಬ್ಬರಿಗೆ ಸೇವೆ ಮಾಡಿ, ಸಮಯ ಕಂಡಲ್ಲಿ ದೇವರಿಗೂ ಮನುಷ್ಯರಿಗೂ ಮಾಡುವ ಪ್ರೀತಿಯಿಂದ ನಮ್ಮ ಶಕ್ತಿಯನ್ನೂ ಜೀವವನ್ನೂ ವೆಚ್ಚ ಮಾಡಲಿಕ್ಕೆ, ನಮ್ಮನ್ನು ಸಿದ್ಧರಾಗ ಮಾಡು. ಇದರಲ್ಲಿ, ನಿನ್ನ ಹೆಸರಿನ ಮಾನಕ್ಕಾಗಿ, ನಮಗೆ ಸಹಾಯ ಮಾಡು! ಆಮೆನ್.

---

## ಸೋಮವಾರದ ಸಂಜೆಗೆ.

ಕರ್ತನಾದ ಯೇಸುವೇ, ಕಷ್ಟ ಪಟ್ಟು, ಭಾರ ಹೊರುವವರೆಲ್ಲರು ನಿನ್ನ ಬಳಿಗೆ ಬರ ಬೇಕೆಂದೂ, ನೀನು ಅವರಿಗೆ ವಿಶ್ರಾಂತಿ ಕೊಟ್ಟು ಅವರ ಆತ್ಮಗಳಿಗೆ ಕ್ಷೇಮ ಕೊಡುವಿ ಎಂದೂ, ನೀ

ನು ಹೇಳಿದದರಿಂದ ನಾವು ಈ ಸಾಯಂಕಾಲದಲ್ಲಿ ನಿನ್ನ ಮುಂದೆ ಬಂದಿದ್ಧೇವೆ. ಇಂದಿನ ಹಗಲೂ ಅದರ ಎಲ್ಲಾ ಕಷ್ಟವೂ ಭಾರವೂ ಈಗ ಕಳದು ಹೋಯಿತು. ನಮ್ಮ ಶರೀರಗಳು ವಿಶ್ರಾಂತಿಯನ್ನು ಅಪೇಕ್ಷಿಸುತ್ತವೆ. ಆದರೆ ನಮ್ಮ ಆತ್ಮಗಳಿಗೆ ಮೊದಲು ನಿನ್ನಲ್ಲಿ ವಿಶ್ರಾಂತಿಯನ್ನುಂಟು ಮಾಡು. ಈ ಹೊತ್ತು ನಡದ್ದನ್ನೆಲ್ಲಾ ನಿನ್ನ ಪರಿಶುದ್ಧ ಸನ್ನಿಧಾನದಲ್ಲಿ ವಿಚಾರಿಸಿದರೆ, ನಮಗೆ ಅನೇಕ ಕಾರಣಗಳಿಂದ ದುಃಖ ಹುಟ್ಟುತ್ತದೆ. ಯಾಕಂದರೆ ನಿನ್ನ ದೃಷ್ಟಿಗೆ ಸರಿ ಬೀಳಲಾರದ ಅನೇಕ ಕಾರ್ಯಗಳು ಬಹಿರಂಗವಾಗಿಯೂ ಅಂತರಂಗವಾಗಿಯೂ ಈ ಹೊತ್ತು ನಡದವು. ಮಾಡ ತಕ್ಕ ಅನೇಕ ಕಾರ್ಯಗಳನ್ನು ಮೈಗಳ್ಳತನದಿಂದಲೂ ಅಜಾಗ್ರತೆಯಿಂದಲೂ ಮಾಡದೆ ಹೋದೆವು. ನೀನು ನಮಗೆ ಕೊಟ್ಟ ಮಾದ್ರಿಯನ್ನು ನಾವು ತಕ್ಕ ಹಾಗೆ ಅನುಸರಿಸಲಿಲ್ಲ; ನಮ್ಮ ನೆರೆಯವರಿಗೆ ತಕ್ಕ ಹಾಗೆ ಸೇವೆ ಮಾಡದೆ, ಅವರ ಉಪಯೋಗಕ್ಕೆ ಸಾಕಾದಷ್ಟು ಸಹಾಯ ಮಾಡದೆ, ಅವರ ಮನಸ್ಸು ಮೆಚ್ಚಿಸದೆ; ಹೋದೆವು. ನಾವು ಮಾಡಿದ ಸತ್ಕ್ರಿಯೆಗಳು ಸಹ ನಿರ್ಮಲವಾದ ಮನಸ್ಸಿನಿಂದುಂಟಾಗಲಿಲ್ಲ. ಮಾಡ ಬಾರದ್ದನ್ನು ಮಾಡಿ, ಮಾಡ ಬೇಕಾದ್ದನ್ನು ಮಾಡದೆ, ಹೋದೆವು. ಆದರೂ ಈ ಹೊತ್ತು ಮಾಡಿದ ಪಾಪಗಳನ್ನೆಲ್ಲಾ ಮುಚ್ಚಿ, ಪರಿಶುದ್ಧವಾದ ನಿನ್ನ ಪ್ರಾಯಶ್ಚಿತ್ತದ ರಕ್ತದಿಂದ ತೊಳೆದು ಬಿಟ್ಟು, ಪರಿಹರಿಸು. ನಮ್ಮ ಮನಸ್ಸಾಕ್ಷಿಯನ್ನು ಶುದ್ಧ ಮಾಡಿ, ಈ ಲೋಕವು ಕೊಡಲಾರದ ನಿನ್ನ ಸಮಾಧಾನವನ್ನು ನಮ್ಮ ಹೃದಯಗಳೊಳಗೆ ಕೊಟ್ಟು, ಈ ಸಮಾಧಾನದಿಂದ ನಮ್ಮ ಆತ್ಮಗಳಿಗೆ ಸುಖವಾದ ವಿಶ್ರಾಂತಿಯನ್ನೂ ಸಂತೃಪ್ತಿಯನ್ನೂ ದಯ ಪಾಲಿಸು. ಯಾವ ಸೃಷ್ಟಿಯಾದರೂ ನಮಗೆ ಕೊಡಲಾರದ ಸಂತೃಪ್ತಿಯನ್ನು ನಿನ್ನಲ್ಲಿ ಹೊಂದುವ ಹಾಗೆಯೂ, ಈ ಲೋಕದ ವ್ಯರ್ಥವಾದ ಪ್ರೀತಿಯನ್ನು ಬಿಟ್ಟು, ಶುದ್ಧವಾದ ನಿನ್ನ ಪ್ರೀತಿಯಿಂದ ಶುದ್ಧರಾಗಿ, ಸತ್ಕ್ರಿಯೆಗಳಲ್ಲಿ ಎಚ್ಚರಿಕೆಯುಳ್ಳವರಾಗಿರುವ ಹಾಗೆಯೂ, ನಿನ್ನ

ಪ್ರೀತಿ ಎಂಬ ಬೆಂಕಿಯನ್ನು ನಮ್ಮ ಹೃದಯಗಳಲ್ಲಿ ಹೊತ್ತಿಸು. ಇಸ್ರಯೇಲನ್ನು ಕಾಯುವವನೇ, ನಿದ್ರೆ ಮಾಡದೆ ತೂಗಡಿಸದೆ ಇರುವವನೇ, ಆಯಾಸವುಳ್ಳ ಶರೀರಕ್ಕೆ ವಿಶ್ರಾಂತಿಯನ್ನು ಕೊಟ್ಟು, ನಿನ್ನ ರೆಕ್ಕೆಗಳ ನೆರಳಿನಲ್ಲಿ ಅದಕ್ಕೆ ಆಶ್ರಯ ಕೊಡು. ಮುಖ್ಯವಾಗಿ ಶರೀರವು ನಿದ್ದೆ ಮಾಡುವ ವೇಳೆಯಲ್ಲಿ ನಮ್ಮ ಆತ್ಮಗಳನ್ನು, ಅವುಗಳಿಗೆ ಯಾವ ಮೋಸವಾದರೂ ಭಯವಾದರೂ ಸಂಭವಿಸದ ಹಾಗೆ, ಕಾಪಾಡು. ನಿತ್ಯವಾದ ಪ್ರೀತಿಯುಳ್ಳವನೇ, ಈ ಪರ್ಯಂತರಕ್ಕೂ ಇಂದಿನ ಹಗಲಿನಲ್ಲಿಯೂ ನಮಗೆ ಮಾಡಿದ ಎಲ್ಲಾ ಕೃಪೆಯ ನಿಮಿತ್ತ ನಿನಗೆ ಸ್ತೋತ್ರವಾಗಲಿ! ನಾವು ಸರ್ವ ಕಾಲ ನಮ್ಮನ್ನು ನಿನಗೂ ನಂಬಿಗೆಯುಳ್ಳ ನಿನ್ನ ಪರಾಮರಿಕೆಗೂ ಒಪ್ಪಿಸಿ ಕೊಡುತ್ತೇವೆ. ನಿನ್ನ ಭಕ್ತರೆಲ್ಲರಿಗೆ ಕೃಪೆಯುಳ್ಳವನಾಗು. ಮುಖ್ಯವಾಗಿ ಕಷ್ಟ ರೋಗ ಶೋಧನೆಗಳಲ್ಲಿ ಇರುವವರನ್ನು ಈ ರಾತ್ರಿಯಲ್ಲಿ ಪರಾಮರಿಸು. ಅವರ ವಿಶ್ವಾಸಕ್ಕೆ ಬಲ ಕೊಟ್ಟು, ಅವರು ಕಡೇ ಜಯವನ್ನು ಹೊಂದುವ ಹಾಗೆ ಅವರಿಗೆ ಸಹಾಯವನ್ನು ಮಾಡು. ಮುಖ್ಯವಾಗಿ ಈ ರಾತ್ರಿಯಲ್ಲಿ ದೇಹವನ್ನು ಬಿಟ್ಟು ಈ ಜೀವದಿಂದ ಬಿಡುಗಡೆಯಾಗತಕ್ಕ ಭಕ್ತರಿಗೆ, ಕಡೇ ಹೋರಾಟವನ್ನು ಸಂತೋಷವಾಗಿ ತೀರಿಸುವದಕ್ಕೆ, ಸಹಾಯ ಮಾಡು. ನಿನ್ನ ಮಹಾ ಕರುಣೆಯ ಪ್ರಕಾರ ನಮ್ಮ ಬಿನ್ನಹಗಳನ್ನು ಆಲೈಸು! ಆಮೆನ್.

---

## ಮಂಗಳವಾರದ ಮುಂಜಾನೆ.

ಪ್ರಿಯ ತಂದೆಯಾದ ದೇವರೇ, ನಿನ್ನ ಕೃಪೆಯಿಂದ ಈ ಹೊಸ ದಿವಸವನ್ನು ನೋಡುತ್ತೇವೆ. ನಿನ್ನ ಪರಾಮರಿಕೆ ನಮ್ಮ ಪ್ರಾಣವನ್ನು ಸಂರಕ್ಷಿಸಿತು. ನಾವು ಸ್ವಸ್ಥವಾಗಿ ಈ ದಿವಸದ ಬೆಳಕನ್ನು ಕಂಡಿದ್ದೇವೆ. ಆದ ಕಾರಣ ವಿನಯವುಳ್ಳ ಹೃದಯಗಳಿಂದ ನಾವು ಅರ್ಪಿಸುವ ಸ್ತೋತ್ರದ ಬಲಿಗಳು ನಿನಗೆ ಸಮರ್ಪಕ

ವಾಗಲಿ! ನಿನ್ನ ಕೃಪೆಯ ಐಶ್ವರ್ಯವೂ, ನೀನು ನಮ್ಮ ಶರೀರಾ ತ್ಮಗಳಿಗೆ ಮಾಡುವ ಎಲ್ಲಾ ಉಪಕಾರಗಳೂ, ನಮ್ಮಲ್ಲಿ ಹೆಚ್ಚು ಹೆಚ್ಚಾಗಿ ಕೃತಜ್ಞತೆಯುಳ್ಳ ಮನಸ್ಸನ್ನು ಹುಟ್ಟಿಸಲಿ! ನಿನ್ನ ದಯವನ್ನು ಹೊಂದಿದವರಾಗಿ, ನಮ್ಮ ನಡೆನುಡಿಗಳಿಂದಲೂ ಧ್ಯಾನ ಭಾವನೆಗಳಿಂದಲೂ ನಿನ್ನನ್ನು ಸ್ತುತಿಸುವ ಹಾಗೆ, ನಮಗೆ ಸಹಾಯ ಮಾಡು. ಈ ಹೊಸ ದಿವಸದ ಆರಂಭದಲ್ಲಿ ನಿನ್ನ ಪರಿಶುದ್ಧ ನಾಮವನ್ನೂ ನೀನು ನಿನ್ನ ಮಕ್ಕಳಾದ ಮನುಷ್ಯರಿಗೆ ನಿತ್ಯವಾಗಿ ಮಾಡುವ ಪ್ರೀತಿಯನ್ನೂ ಹೊಸದಾಗಿ ನಮಗೆ ತಿಳಿಸು. ಛಳಿಯೂ ಕತ್ತಲೆಯೂ ಆದ ನಮ್ಮ ಹೃದಯಗಳಿಗೆ ನಿನ್ನ ಪ್ರೀತಿಯ ಬಿಸಲಿನಿಂದ ಬೆಳಕನ್ನೂ ಶೆಖೆಯನ್ನು ಕೊಡು. ನೀನು ನಮಗೆ ಮಾಡಿದ ಹಾಗೆಯೇ ನಾವು ಹೋಗಿ, ಮತ್ತೊಬ್ಬರಿಗೆ ಪ್ರೀತಿ ಮಾಡುವ ಹಾಗೆ, ನಮ್ಮನ್ನು ಪ್ರೇರೇಪಿಸು. ನಾವು ಈ ದಿವಸದಲ್ಲಿಯೂ ನಮಗಿರುವ ಸಮಯವನ್ನೂ ಶಕ್ತಿಯನ್ನೂ ಪ್ರೀತಿಯ ಸೇವೆಯಲ್ಲಿ ಬಳಸುವ ಹಾಗೆಯೂ, ನಮಗೆ ಬೀಳುವ ಕಷ್ಟಗಳು ಸಹ ಕಷ್ಟವಾಗಿ ಕಾಣದ ಹಾಗೆಯೂ, ನಮಗೆ ಸಹಾಯ ಮಾಡು. ನೀನು ನಮಗೆ ಕಳುಹಿಸುವ ಶ್ರಮೆಗಳನ್ನು ತಾಳುವ ಹಾಗೆಯೂ, ಅವುಗಳ ಮೂಲವಾಗಿ ವಿನಯದಲ್ಲಿ ವೃದ್ಧಿ ಹೊಂದುವ ಹಾಗೆಯೂ, ಶುದ್ಧತ್ವದಲ್ಲಿ ಬೆಳದು ನಿನ್ನಲ್ಲಿ ಹೆಚ್ಚು ಹೆಚ್ಚಾಗಿ ಅನ್ಯೋನ್ಯರಾಗುವ ಹಾಗೆಯೂ, ನಮಗೆ ಕೃಪೆ ಮಾಡು. ನೀನೇ ಪ್ರೀತಿಯಾಗಿದ್ಧಿ! ಹೀಗಿರಲಾಗಿ ನಿನ್ನನ್ನು ಯಾರು ಪ್ರೀತಿ ಮಾಡದೆ ಹುಡುಕದೆ ಇದ್ದಾರು? ಸೈತಾನನೂ ಪ್ರಪಂಚವೂ ನಮ್ಮ ಸ್ವಂತ ಇಚ್ಛೆ ಆಶೆಗಳೂ ನಮಗೆ ಮೋಸ ಮಾಡಿದದರಿಂದ, ನಾವು ನಿನ್ನನ್ನು ಅಗಲಿದೆವು. ಆದರೆ ಈಗ ನೀನು ನಮಗೆ ತಿರಿಗಿ ಶಿಕ್ಕುವ ಹಾಗೆ, ನಿನ್ನ ಪರಿಶುದ್ಧಾತ್ಮದಿಂದ ನಮಗೆ ಸಹಾಯ ಮಾಡು. ನಾವು ಇಹ ಲೋಕವನ್ನು ದಾಟ ಹೋಗುವ ಪ್ರಯಾಣದಲ್ಲಿ ನಿನಗೂ ಪರಲೋಕದಲ್ಲಿರುವ ನಿನ್ನ ಮಹಿಮೆಗೂ ಹೆಚ್ಚು ಹೆಚ್ಚಾಗಿ ಸಮಿಾಪ ಬರುವ ಹಾಗೆ, ನಮ್ಮನ್ನು ಆಶೀ

ರ್ವದಿಸು. ಈ ದಿವಸದಲ್ಲಿಯೂ ನಮ್ಮನ್ನು ಮರಣಕ್ಕಾಗಿ ಸಿದ್ಧ ಮಾಡು. ಮತ್ತು ನಾವು ಈ ಲೋಕವನ್ನು ಬಿಡುವಾಗ, ನಿತ್ಯವಾಗಿ ನಿನಗೆ ಸೇವೆ ಮಾಡಿ ಸದಾಕಾಲದಲ್ಲಿ ನಿನ್ನ ಮುಖವನ್ನು ನೋಡುವ ನಿನ್ನ ದಾಸರ ಸಮಿಾಪದಲ್ಲಿ ನಮ್ಮನ್ನು ಶೇರಿಸು. ಕರ್ತನೇ, ಸಹಾಯ ಮಾಡು. ಇಂದಿನ ದಿವಸದಲ್ಲಿಯೂ ನಿನ್ನ ಕೃಪೆಯ ಪ್ರಕಾರ ನಮಗೆ ಅನುಗ್ರಹವನ್ನು ಮಾಡು! ಆಮೆನ್.

---

## ಮಂಗಳವಾರದ ಸಂಜೆಗೆ.

ಕರ್ತನಾದ ಯೇಸುವೇ, ಈಗ ಸಾಯಂಕಾಲವಾಯಿತು; ಹಗಲು ಸಂದು ಹೋಯಿತು. ಆದ ಕಾರಣ ನಮ್ಮ ಸಂಗಡ ಇರು. ನಮ್ಮ ಬಳಿಯಲ್ಲಿ ಉಳಕೊಂಡು, ವಾಸ ಮಾಡು. ಮನುಷ್ಯರ ಬಳಿಯಲ್ಲಿ ಇರುವದಕ್ಕೆ ನಿನಗೆ ಸಂತೋಷವಾಗುತ್ತದೆ. ಸೌಖ್ಯವಾದ ನಿನ್ನ ಸಾಮಿಾಪ್ಯವು ನಮಗೆ ಅಗತ್ಯವಾಗಿ ಬೇಕು. ನೀನು ನಮ್ಮನ್ನು ಕಳದ ಹಗಲಿನಲ್ಲಿ ಕೃಪೆಯಾಗಿ ನಡಿಸಿ, ಬಹಳ ತಾಳ್ಮೆಯಿಂದ ಸೈರಿಸಿ, ಮೋಸವಾಗದ ಹಾಗೆ ಕಾಪಾಡಿದಿ. ಇದರ ನಿಮಿತ್ತ ನಿನಗೆ ಸ್ತುತಿ ಸ್ತೋತ್ರ ಮಾಡುತ್ತೇವೆ. ಈಗ ರಾತ್ರಿಯಾದ ಮೇಲೆ, ನಿನ್ನಲ್ಲಿ ವಿಶ್ರಮಿಸಿ ಕೊಳ್ಳ ಬೇಕೆಂದು, ನಮಗೆ ಮನಸ್ಸುಂಟು. ಈ ರಾತ್ರಿಯಲ್ಲಿ ನಮಗೆ ಏನಾದರೂ ನಷ್ಟವಾಗದಂತೆ ನಿನ್ನಿಂದ ಆಶೀರ್ವಾದ ಉಂಟಾಗ ಬೇಕೆಂದು, ಅಪೇಕ್ಷಿಸುತ್ತೇವೆ. ನಮಗೋಸ್ಕರ ನೀನು ಕ್ರೂಜೆಯಲ್ಲಿ ಮರಣ ಹೊಂದಿದಿಯಲ್ಲ? ಈ ನಿನ್ನ ಮರಣದ ಫಲವು ನಮಗೆ ಶಿಕ್ಕುವ ಹಾಗೆ ಮಾಡು. ಈ ಹಗಲಿನಲ್ಲಿ ನಾವು ಮಾಡಿದ ಪಾಪಗಳನ್ನೂ ಅಜಾಗ್ರತೆಗಳನ್ನೂ ಮಾಡ ಬೇಕಾದದ್ದನ್ನು ಮಾಡದೆ ಹೋದ ತಪ್ಪುಗಳನ್ನೂ ಮನ್ನಿಸು. ಪರಿಹಾರವಾಗದ ಒಂದು ಪಾಪವಾದರೂ ನಮ್ಮ ಮನಸ್ಸಾಕ್ಷಿಯಲ್ಲಿ ಉಳಿಯದೆ ಇರಲಿ! ನಿನಗೂ ನಮಗೂ ನಡುವೆ ಬಂದು ನಮ್ಮನ್ನು ಅಗಲಿಸುವಂಥ ಯಾವ ಅಡ್ಡ ಗೋಡೆಯಾದರೂ ಇರಲಾಗ

ದು. ನಿನ್ನ ಆಜ್ಞೆಗಳನ್ನು ಲಕ್ಷಿಸಿದರೆ ನಮ್ಮ ಸಮಾಧಾನವು ನೀರಿನ ಪ್ರವಾಹದ ಹಾಗೆಯೂ, ನಮ್ಮ ನೀತಿಯು ಸಮುದ್ರದ ತೆರೆಗಳ ಹಾಗೆಯೂ, ಇರುವದೆಂದು, ನೀನು ಹೇಳಿದಿಯಲ್ಲ? ಕರ್ತನೇ, ಹೀಗೆ ನಮಗಾಗುವ ಹಾಗೆ ಸಹಾಯ ಮಾಡು. ನಾವು ನಿನ್ನ ಆಜ್ಞೆಗಳನ್ನು ಲಕ್ಷಿಸುವ ಹಾಗೆ, ನಮ್ಮ ಮನಸ್ಸನ್ನು ಪ್ರೇರೇಪಿಸು. ನಿನ್ನ ಆಜ್ಞೆಗಳು ಕಠಿಣವಾದವುಗಳಲ್ಲ. ನೀನು ನಮ್ಮಿಂದ ಬಹಳ ಕೇಳುವದಿಲ್ಲ. ನಾವು ನಿನ್ನಿಂದ ಮುಕ್ತಿಯನ್ನು ಪಡಕೊಳ್ಳ ಬೇಕೆಂದು, ನೀನು ಕೇಳುತ್ತಿ, ಹೌದು. ನೀನು ನಮಗೆ ಮುಕ್ತಿಯನ್ನು ಕೊಡುವಿ. ನಾವು ಮುಕ್ತಿಯನ್ನು ಹೊಂದದ ಹಾಗೆ, ನಮಗೆ ಅಭ್ಯಂತರ ಮಾಡುವದನ್ನೆಲ್ಲಾ ನಮಗೆ ದೂರ ಮಾಡು. ನಮ್ಮ ಸ್ವಂತ ಪ್ರೀತಿಯನ್ನೂ ಈ ಲೋಕದ ಪ್ರೀತಿಯನ್ನೂ ಬಿಡಿಸು. ಸುಖಕರವಾದ ನಿನ್ನ ಪ್ರೀತಿಯಲ್ಲಿ ನಮ್ಮ ಹೃದಯಗಳಿಗೆ ತೃಪ್ತಿಯನ್ನೂ ಸಮಾಧಾನವನ್ನೂ ಕೊಡು. ನಮ್ಮ ಶರೀರಾತ್ಮಗಳು ಕ್ಷೇಮದಲ್ಲಿರುವ ಹಾಗೆ, ನೀನು ಈ ರಾತ್ರಿಯಲ್ಲಿ ನಮ್ಮ ಸಮೀಪದಲ್ಲಿ ಇರು. ನಿನ್ನ ಅನ್ಯೋನ್ಯದಿಂದ ನಮ್ಮ ಶರೀರಾತ್ಮಗಳಿಗೆ ಉಪಶಮನವನ್ನೂ ಬಲವನ್ನೂ ಕೊಡು. ಆಗ ನಾವು ನಿನಗೆ ನಿತ್ಯ ಸ್ತೋತ್ರಗಳನ್ನು ಮಾಡುವೆವು. ನಮ್ಮ ಮನೆಯವರಿಗೂ, ಕುಟುಂಬದವರಿಗೂ, ಸಹೋದರರಿಗೂ, ಆತ್ಮದಲ್ಲಿ ನಮ್ಮ ಸಂಗಡ ಐಕ್ಯವಾಗಿರುವವರಿಗೂ, ತಮಗಾಗಿ ವಿಜ್ಞಾಪನೆ ಮಾಡ ಬೇಕೆಂದು ನಮ್ಮನ್ನು ಬೇಡಿ ಕೊಂಡವರೆಲ್ಲರಿಗೂ, ಕೃಪೆ ಮಾಡು. ಅವರೆಲ್ಲರನ್ನು ಪರಿಪಾಲನೆ ಮಾಡಿ, ನಿನ್ನ ದಿವ್ಯ ಐಶ್ವರ್ಯದೊಳಗಿಂದ ಆಶೀರ್ವದಿಸು! ಆಮೆನ್.

---

## ಬುಧವಾರದ ಮುಂಜಾನೆ.

ಕರ್ತನಾದ ಯೇಸುವೇ, ನೀನು ಲೋಕದ ಅಂತ್ಯದ ಪರ್ಯಂತರ ದಿನಾಲು ನಿನ್ನ ಜನರ ಸಂಗಡ ಇರುತ್ತಿ ಎಂದು ಹೇ

ಳಿದ್ದಿ. ಈ ದಿವಸದಲ್ಲಿಯೂ ನಮ್ಮ ಸಂಗಡ ಇರು. ಈ ವಾರದ ಮಧ್ಯದಲ್ಲಿ ನಿನ್ನ ಸನ್ನಿಧಿಯಲ್ಲಿ ನಮ್ಮನ್ನು ಪರೀಕ್ಷಿಸಿ ಕೊಂಡು, ನಮ್ಮ ಸಮಯವನ್ನು ಹ್ಯಾಗೆ ಕಳದೆವೆಂದೂ, ನಮ್ಮ ಆತ್ಮಗಳಿಗೆ ನಿತ್ಯಜೀವದ ವಿಷಯದಲ್ಲಿ ಯಾವ ಲಾಭ ಬಂತೆಂದೂ, ವಿಚಾರಿ ಸುವದಕ್ಕೆ ಮನಸ್ಸಾಗಿದ್ಧೇವೆ. ನಮ್ಮ ಸಮಯವು ಬಿರುಘಾಳಿಯ ಹಾಗೆ ತೀವ್ರವಾಗಿ ಹೋಗಿ ಬಿಡುತ್ತದೆ. ಈ ವಾರವು ಸಹ ಬೇಗ ತೀರಿ ಹೋಗುತ್ತದೆ. ಆದರೂ ನೀನು ನಮಗೆ ಕೊಟ್ಟ ಸಮಯ ವನ್ನು ನಾವು ಬಹಳ ಜಾಗ್ರತೆಯಾಗಿ ಪ್ರಯೋಗಿಸ ಬೇಕು. ಈ ಲೋಕದಲ್ಲಿ ನಾವು ಬೀಜ ಬಿತ್ತುತ್ತೇವೆ; ಆ ಲೋಕದಲ್ಲಿ ಪೈರು ಕೊಯ್ಯ ಬೇಕು. ಪಾಪದಿಂದ ನಮಗೆ ಆದ ನಷ್ಟವು ಈ ಲೋ ಕದಲ್ಲಿ ಪರಿಹಾರವಾಗ ಬೇಕು. ನಾವು ಕಡೆಯಲ್ಲಿ ನಿನ್ನ ಮುಂದೆ ನಿಲ್ಲುವ ಹಾಗೆಯೂ, ಪರಲೋಕದಲ್ಲಿರುವ ನಿನ್ನ ನಿತ್ಯರಾಜ್ಯಕ್ಕೆ ಯೋಗ್ಯರಾಗುವ ಹಾಗೆಯೂ, ನಮಗೆ ಈ ಲೋಕದಲ್ಲಿ ಉಪ ದೇಶವಾಗ ಬೇಕು. ನಾವು ಈ ಲೋಕದಲ್ಲಿರುವ ಪ್ರಯೋಜನ ವನ್ನೂ ನಿತ್ಯ ಲೋಕದಲ್ಲಿ ನಮಗೆ ಇಟ್ಟಿರುವ ಗುರಿಯನ್ನೂ ಎಂ ದಾದರೂ ಮರಿಯದ ಹಾಗೆ ನಮ್ಮನ್ನು ಎಚ್ಚರಿಸು. ಈಗಲೂ ತಿ ರಿಗಿ ಅದನ್ನು ನಮ್ಮ ಆತ್ಮ ದೃಷ್ಟಿಯ ಮುಂದಿಡು. ಈ ಗುರಿಗೆ ನಾವು ದೂರವಾಗದೆ, ಹೆಚ್ಚು ಹೆಚ್ಚಾಗಿ ಸಮೀಪವಾಗುವ ಹಾಗೆ, ಇಂದಿನ ದಿವಸದಲ್ಲಿ ನಮ್ಮನ್ನು ಆಳಿ, ನಡಿಸು. ನಾವು ಯಾವ ಕೇ ಡಿನಲ್ಲಾದರೂ ಶೇರದೆ, ನಮ್ಮ ಕರೆಯುವಿಕೆಯ ಪ್ರಕಾರ ಶಾಂ ತರಾಗಿ ನಡಕೊಂಡು, ಕೆಟ್ಟದ್ದನ್ನೆಲ್ಲಾ ಅಗಲಿ, ನಮಗೆ ಆಜ್ಞಾಪಿ ಸಿರುವದನ್ನು ಯಾವಾಗಲೂ ಮಾಡುವ ಹಾಗೆ, ನಮ್ಮನ್ನು ನಿನ್ನ ಕಣ್ಣುಗಳಿಂದ ನಡಿಸಿ, ನಿನ್ನ ಪರಿಶುದ್ಧಾತ್ಮದಿಂದ ಯಾವಾಗಲೂ ನ ಮ್ಮಲ್ಲಿ ಯತ್ನೈಸಿ, ಬಳ್ಳಿಗಳು ಯಾವ ಪ್ರಕಾರ ದ್ರಾಕ್ಷೇ ಗಿಡದಿಂ ದಲೇ ತಮ್ಮ ಜೀವದ ಅಭಿವೃದ್ಧಿಯನ್ನು ಹೊಂದುತ್ತವೋ, ಅದೇ ಪ್ರಕಾರ ನಮಗೆ ಯಾವಾಗಲೂ ನಿನ್ನ ಕ್ಷೇಮಕರವಾದ ಸನ್ನಿಧಿ ಯಿಂದ ಅಭಿವೃದ್ಧಿಯನ್ನು ಕೊಡು. ನಾವು ನಿತ್ಯಜೀವಕ್ಕಾಗಿ

ನೆಲೆಯಾಗಿರುವ ನೀತಿಯ ಫಲಗಳನ್ನು ಐಶ್ವರ್ಯವಾಗಿ ಫಲಿಸುವಂಥ ಒಳ್ಳೇ ಗಿಡಗಳಾಗುವ ಹಾಗೆ ಮಾಡು. ನಮ್ಮ ಚಿಂತೆಗಳನ್ನೆಲ್ಲಾ ನಿನ್ನ ಮೇಲೆ ಹಾಕುವ ಭರವಸವನ್ನು ನಮಗೆ ಕೊಡು. ನಮಗೋಸ್ಕರವೂ ನಮ್ಮವರಿಗೋಸ್ಕರವೂ ನೀನು ಚಿಂತೆ ಮಾಡು. ನೀನು ನಮಗೆ ಆಜ್ಞಾಪಿಸಿದವುಗಳನ್ನೆಲ್ಲಾ ನಾವು ಮಾಡುವ ಹಾಗೆ ನಮಗೆ ಬಲವನ್ನು ಕೊಡು. ಮುಖ್ಯವಾಗಿ ಎಲ್ಲಾ ಶ್ರಮೆಗಳಲ್ಲಿ ನಮ್ಮನ್ನು ನಾವೇ ಅಲ್ಲಗಳದು, ನಮ್ಮ ಕ್ರೂಜೆಯನ್ನು ಹೊತ್ತು ಕೊಳ್ಳುವ ಹಾಗೆ, ನಮಗೆ ತಾಳ್ಮೆಯನ್ನು ದಯ ಪಾಲಿಸು. ಈ ಹೊತ್ತು ನಾವು ನಿನ್ನ ಬೆಳಕಿನಲ್ಲಿ ಸಂಚಾರ ಮಾಡುವ ಹಾಗೆಯೂ, ಕಡೆಗೂ ಆ ಲೋಕದಲ್ಲಿ ನಿನ್ನ ಸಂಗಡ ನಿತ್ಯವಾಗಿ ಬೆಳಕಿನಲ್ಲಿ ವಾಸ ಮಾಡುವ ಪದವಿಯನ್ನು ಪಡಕೊಳ್ಳುವ ಹಾಗೆಯೂ, ಸಹಾಯ ಮಾಡು! ಆಮೆನ್.

---

## ಬುಧವಾರದ ಸಂಜೆಗೆ.

ದಯ ಉಳ್ಳ ಕರ್ತನೂ ರಕ್ಷಕನೂ ಆಗಿರುವ ದೇವರೇ, ರಾತ್ರಿ ಈಗ ಬಂದದೆ. ಹಗಲಿನ ಕೆಲಸವು ತೀರಿ ಹೋಗಿದೆ. ಆದದರಿಂದ ನಾವು ವಿಶ್ರಾಂತಿ ತಕ್ಕೊಳ್ಳಲಿಕ್ಕೆ ಮನಸ್ಸು ಮಾಡಿ, ಮಲಗುವದಕ್ಕಿಂತ ಮುಂಚೆ ನಿನ್ನ ಸನ್ನಿಧಿಗೆ ಬಂದಿದ್ದೇವೆ. ನೀನು ಈ ಹೊತ್ತು ನಮಗೆ ಬಹಳ ಉಪಕಾರ ಮಾಡಿ, ನಮ್ಮ ಶರೀರಾತ್ಮಗಳನ್ನು ಕಾಪಾಡಿದದರಿಂದ, ನಿನಗೆ ಸ್ತೋತ್ರ ಮಾಡುತ್ತೇವೆ. ನೀನು ನಮ್ಮ ಆತ್ಮಗಳಿಗೆ ಶಾಂತ ಮಾಡಿ, ಪ್ರಯೋಜನವಿಲ್ಲದ ಆಲೋಚನೆಗಳನ್ನೂ ಚಿಂತೆಗಳನ್ನೂ ನಮ್ಮೊಳಗಿಂದ ತೆಗದು ಹಾಕಿ, ನಿನ್ನ ಉಪದೇಶಕ್ಕೆ ನಮ್ಮ ಹೃದಯಗಳನ್ನು ತೆರೆಯ ಬೇಕೆಂದು, ಬೇಡಿ ಕೊಳ್ಳುತ್ತೇವೆ. ಪಾಪದೊಳಗೆ ಬಿದ್ದ ಮನುಷ್ಯರಾದ ನಮ್ಮನ್ನು ನೀನು ಈ ಲೋಕದಲ್ಲಿ ಇರಿಸಿದ್ದಿ. ನಮ್ಮ ಆತ್ಮಗಳು ಈ ಲೋಕದ ಮಾಯೆಯಿಂದಲೂ ಪಾಪಗಳಿಂದಲೂ ದು

ರಾಶಿಗಳಿಂದಲೂ ಕೆಟ್ಟು ಹೋಗ ಬೇಕೆಂದೂ, ನಾವು ಕಡೆಯಲ್ಲಿ ನಿತ್ಯವಾದ ಕತ್ತಲೆಯೂ ದುಃಖವೂ ಇರುವಲ್ಲಿಗೆ ಹೋಗ ಬೇಕೆಂದೂ, ನೀನು ಇಚ್ಛೈಸುವದಿಲ್ಲ. ನಾವು ರೋಗಿಷ್ಟರಾಗಿ ಬಿದ್ದು, ಧರ್ಮಸಾಲೆಯಲ್ಲಿರುತ್ತೇವೆ. ನೀನು ಯಜಮಾನನಾಗಿ, ನಿನ್ನ ವೈದ್ಯನಾಗಿರುವ ಕರ್ತನು ನಾನೇ ಎಂದು, ನಮಗೆ ಹೇಳುತ್ತಿ. ಯಾಕಂದರೆ ಈ ಲೋಕದಲ್ಲಿ ಪಾಪವೆಂಬ ರೋಗದಿಂದ ಸ್ವಸ್ಥವಾಗ ಬೇಕು. ಈ ಲೋಕದಲ್ಲಿ ನಿನ್ನ ಕೃಪೆಯ ಬೆಳಕು ನಮ್ಮ ಮೇಲೆ ಪ್ರಕಾಶ ಚೆಲ್ಲ ಬೇಕು. ನಿನ್ನ ವಿಶ್ವಾಸವೂ ನಿತ್ಯಜೀವದ ತ್ರಾಣವೂ ನಮ್ಮನ್ನು ತುಂಬ ಬೇಕು. ಮಹಿಮೆಯೂ ಸಮಾಧಾನವೂ ಪುತ್ರಸ್ವೀಕಾರವೂ ಎಂಬದನ್ನುಂಟು ಮಾಡುವಂಥ ನಿನ್ನ ಪರಿಶುದ್ಧಾತ್ಮವು ಇಲ್ಲಿ ನಮ್ಮಲ್ಲಿ ಶೇರಿ, ವಾಸ ಮಾಡ ಬೇಕು. ನಾವು ಇಲ್ಲಿ ನಿನ್ನ ಆತ್ಮದಿಂದ ತುಂಬ ಬೇಕು. ಐಯ್ಯೋ, ಕರ್ತನಾದ ಯೇಸುವೇ, ನಂಬಿಗೆಯುಳ್ಳ ನಮ್ಮ ರಕ್ಷಕನೇ, ಈ ದೊಡ್ಡ ಕೆಲಸದಲ್ಲಿ ನಮ್ಮಿಂದ ಏನೂ ಕಡಿಮೆಯಾಗದ ಹಾಗೆ, ನಮಗೆ ಸಹಾಯ ಮಾಡಿ, ನಮ್ಮನ್ನು ಎಚ್ಚರಿಸು. ನಾವು ಈ ಲೋಕದಲ್ಲಿ ಬದುಕುವ ವೇಳೆಯಲ್ಲಿ ಈ ದೊಡ್ಡ ಕಾರ್ಯವು ಉಂಟಾಗುವ ಹಾಗೆ, ನಮಗೆ ಸಂಭವಿಸುವ ಸುಖ ದುಃಖಗಳಿಂದಲೂ ಅನುಕೂಲ ಪ್ರತಿಕೂಲಗಳಿಂದಲೂ ಸಹಾಯ ಮಾಡು. ಮುಖ್ಯವಾಗಿ ನೀನೇ ಈ ಸಾಯಂಕಾಲದಲ್ಲಿಯೂ ರಾತ್ರಿಯಲ್ಲಿಯೂ ಯಾವಾಗಲೂ ನಮ್ಮ ಸಂಗಡ ಇದ್ದು, ಸೈತಾನನನ್ನೂ ಅಂಧಕಾರದ ಸಮಸ್ತ ರಾಜ್ಯವನ್ನೂ ನಮಗೆ ನಷ್ಟ ಮಾಡುವ ಎಲ್ಲಾನ್ನೂ ನಮಗೆ ದೂರ ಮಾಡಿ, ವಿನಯವೂ ಪಶ್ಚಾತ್ತಾಪವೂ ಉಳ್ಳ ಮನಸ್ಸನ್ನು ನಮಗೆ ಕೊಟ್ಟು, ನಮ್ಮ ಪಾಪಗಳನ್ನೆಲ್ಲಾ ಪರಿಹರಿಸಿ, ನಿನ್ನ ಪರಿಶುದ್ಧಾತ್ಮದಿಂದ ನಮ್ಮನ್ನು ಶುದ್ಧ ಮಾಡು. ನೀನು ಸಮಸ್ತ ಅವಯವಗಳಿಗೆ ಜೀವವನ್ನು ಕೊಡುವ ತಲೆಯಾಗಿದ್ದು, ನಮ್ಮಲ್ಲಿ ಯತ್ನೈಸಿ, ಈ ರಾತ್ರಿಯಲ್ಲಿ ನಿನ್ನ ಪರಿಶುದ್ಧ ಕೆಲಸವನ್ನು ನಮ್ಮಲ್ಲಿ ನಡಿಸು; ಎಂಥವರಾಗ ಬೇಕೋ, ಅಂ

ಥವರನ್ನೇ ನಮ್ಮನ್ನು ಮಾಡು; ಮತ್ತು ಅಂತ್ಯಕಾಲದಲ್ಲಿ ಸರ್ವ ತ್ರಾಣವುಳ್ಳ ನಿನ್ನ ವಾಕ್ಯದಿಂದ ನಮ್ಮ ಶರೀರಗಳನ್ನು ಸಹ ಮಹಿಮೆಯಾಗಿ ಎಬ್ಬಿಸಿ, ನಿನ್ನ ಪರಿಶುದ್ಧ ಪಟ್ಟಣದಲ್ಲಿ ನಮಗೆ ಪ್ರವೇಶವನ್ನು ದಯ ಮಾಡು. ಆ ಪಟ್ಟಣದಲ್ಲಿ ಅಪವಿತ್ರವಾದದ್ದೊಂದಾದರೂ ಶೇರುವದಿಲ್ಲ. ದೇವರ ಮಹಿಮೆಯು ಅದರ ಬೆಳಕು; ಕುರಿಮರಿಯು ಅದರ ದೀಪವು. ಅಲ್ಲಿ ನಾವು ನಿನಗೆ ನಿತ್ಯ ಸ್ತೋತ್ರಗಳನ್ನು ಅರ್ಪಿಸುತ್ತೇವೆ! ಆಮೆನ್.

---

## ಬೃಹಸ್ಪತಿವಾರದ ಮುಂಜಾನೆ.

ಕೃಪೆಯುಳ್ಳ ತಂದೆಯಾಗಿರುವ ದೇವರೇ! ಪರಲೋಕಕ್ಕಾಗಿ ನಮ್ಮನ್ನು ಸಿದ್ಧ ಮಾಡಿ ಕೊಳ್ಳ ತಕ್ಕಂಥ ಈ ಲೋಕದಲ್ಲಿ ಈ ದಿವಸವನ್ನು ನೋಡುವ ಹಾಗೆ, ನೀನು ನಮಗೆ ದಯ ಮಾಡಿದ್ಧಿ. ನಿನ್ನ ಕೃಪೆ ಎಷ್ಟೋ ದೊಡ್ಡದು! ನೀನು ಶರೀರಾತ್ಮಗಳ ಮೇಲೆ ನಿನ್ನ ಉಪಕಾರಗಳನ್ನು ಐಶ್ವರ್ಯವಾಗಿ ಸುರಿಸುತ್ತಿ. ಮುಖ್ಯವಾಗಿ ನೀನು ನಿನ್ನ ಪ್ರಿಯ ಮಗನಾದ ಯೇಸು ಕ್ರಿಸ್ತನಿಂದ ನಮಗೆ ನಿನ್ನ ನಾಮವನ್ನು ಪ್ರಕಟ ಮಾಡಿ, ನಿನ್ನ ಜನಾಂಗದ ಮಧ್ಯದಲ್ಲಿ ನಮ್ಮನ್ನು ಶೇರಿಸಿದದರಿಂದ, ನಿನಗೆ ಸ್ತೋತ್ರ ಮಾಡುತ್ತೇವೆ. ಯಾಕಂದರೆ ನಿನ್ನನ್ನೂ ನೀನು ಕಳುಹಿಸಿದ ಯೇಸು ಕ್ರಿಸ್ತನನ್ನೂ ತಿಳಿಯುವದೇ ನಿತ್ಯ ಜೀವವಾಗಿದೆ. ಹೀಗಿರುವದರಿಂದ ನಾವು ಈ ದಿವಸದಲ್ಲಿ ನಿನ್ನನ್ನು ಹೆಚ್ಚಾಗಿ ತಿಳಿಯುವ ಹಾಗೆಯೂ, ನಿನ್ನ ತಿಳುವಿಕೆಯಿಂದ ನಮ್ಮ ನಡತೆಯಲ್ಲಿ ಫಲ ಉಂಟಾಗುವ ಹಾಗೆಯೂ, ನಮಗೆ ಸಹಾಯ ಮಾಡು. ಅಂಧಕಾರದ ಪ್ರೀತಿಯನ್ನೆಲ್ಲಾ ನಿನ್ನ ಪರಿಶುದ್ಧ ಬೆಳಕಿನಿಂದ ಹೊರಡಿಸು. ಮತ್ತು ಅಂಧಕಾರದೊಳಗಿಂದ ತನ್ನ ಆಶ್ಚರ್ಯವಾದ ಬೆಳಕಿಗಾಗಿ ನಮ್ಮನ್ನು ಕರೆದವನ ಸದ್ಗುಣಗಳನ್ನು ನಾವು ಈ ಲೋಕದ ಅಂಧಕಾರದಲ್ಲಿ ಪ್ರಸಿದ್ಧ ಮಾಡುವ ಹಾಗೆ, ನಮಗೆ ಸಹಾ

ಯ ಮಾಡು. ಇಂದಿನ ದಿವಸದಲ್ಲಿಯೂ ದೇವರ ಮಗನ ವಿಶ್ವಾಸದಲ್ಲಿ, ಕರ್ತನಾದ ಯೇಸುವೇ, ನಿನ್ನ ಹೆಜ್ಜೆಗಳನ್ನು ಹಿಡುಕೊಳ್ಳುತ್ತಾ ಬದುಕ ಬೇಕೆಂದೂ, ಇದಕ್ಕಾಗಿ ನೀನೇ ನಮಗೆ ಸಹಾಯ ಮಾಡು ಎಂದೂ, ಬೇಡುತ್ತೇವೆ. ಎಲ್ಲಾ ಗಂಡಾಂತರಗಳಲ್ಲಿಯೂ ನಮಗೆ ಆಶ್ರಯವಾಗು. ಮತ್ತು ನಾವು ಸೈರಿಸಕೂಡದಷ್ಟು ಕಠಿಣವಾದ ಶೋಧನೆಗಳು ನಮಗೆ ಸಂಭವಿಸದಹಾಗೆ, ನಮ್ಮನ್ನು ಕಾಪಾಡು. ನಾವು ನಮ್ಮ ಸ್ವಂತ ಬಲ ಯುಕ್ತಿ ಸದ್ಗುಣಗಳಲ್ಲಿ ನಂಬಿಗೆ ಇಡದ ಹಾಗೆಯೂ, ಪಾಪಕ್ಕೆ ಅಂಜುವ ಹಾಗೆಯೂ, ನಮಗೆ ಬುದ್ಧಿ ಕೊಡು. ನಿತ್ಯಜೀವವೂ ಕಡೇ ನ್ಯಾಯತೀರ್ವಿಕೆಯೂ ಯುಗಯುಗಾಂತರಗಳಿಗೆ ಇರುವಂಥ ಶಿಕ್ಷೆಯೂ ಏನೆಂದು, ನಾವು ಮನಸ್ಸಿನಲ್ಲಿ ನೆಟ್ಟಗೆ ಗ್ರಹಿಸುವಹಾಗೆ, ಮಾಡು. ಎರಡನೇ ಮರಣಕ್ಕೆ ನಮ್ಮ ಮೇಲೆ ಅಧಿಕಾರವಿರದ ಹಾಗೆಯೂ, ಮೊದಲನೇ ಮರಣವು ಸಹ ನಮಗೆ ಭಯಂಕರವಾಗದ ಹಾಗೆಯೂ, ನಮಗೆ ಸಹಾಯ ಮಾಡು. ನಿನ್ನ ರಕ್ತವನ್ನು ನಮ್ಮ ಮೇಲೆ ತಳಿಸು. ಸತ್ಯ ಪಶ್ಚಾತ್ತಾಪವನ್ನು ನಮಗೆ ಕೊಡು. ಕುರಿಮರಿಯಾದ ನಿನ್ನ ರಕ್ತದಿಂದ ನಮ್ಮ ಒಳಗಿನ ಮನುಷ್ಯನ ವಸ್ತ್ರಗಳನ್ನು ತೊಳೆದು, ಶುಭ್ರ ಮಾಡು. ಈ ದಿವಸವು ನಮಗೆ ನಿಶ್ಚಯವಾಗಿ ಕೃಪೆಯ ದಿವಸವಾಗುವಹಾಗೆ, ನಿನ್ನ ಆಶೀರ್ವಾದವನ್ನು ನಮಗೆ ಕೊಡು. ನಮಗೂ ನಮ್ಮವರಿಗೂ ಈ ಹೊತ್ತು ಶರೀರಾತ್ಮಗಳಲ್ಲಿ ಯಾವ ನಷ್ಟವೂ ಸಂಭವಿಸದ ಹಾಗೆ, ನೀನೇ ನಮ್ಮನ್ನು ಕಾಪಾಡಿ, ನಮಗೆ ಅಗತ್ಯವಾಗಿರುವ ಪ್ರಕಾರವೂ ನಿನ್ನ ಪ್ರೀತಿಯ ಐಶ್ವರ್ಯದ ಪ್ರಕಾರವೂ ನಮಗೆ ಉಪಕಾರ ಮಾಡು! ಆಮೆನ್.

---

## ಬೃಹಸ್ಪತಿವಾರದ ಸಂಜೆಗೆ.

ಕೃಪೆಯೂ ಕರುಣೆಯೂ ಉಳ್ಳಂಥ, ಪರಲೋಕದಲ್ಲಿರುವ

ತಂದೆಯೇ! ಈ ಸಾಯಂಕಾಲದಲ್ಲಿ ನಿನ್ನ ಸನ್ನಿಧಾನವನ್ನು ಹುಡುಕಿ, ನೀನು ನಮಗೆ ಈ ಹೊತ್ತು ಮಾಡಿದ ಎಲ್ಲಾ ಕೃಪೆ ಪರಾಮರಿಕೆಗಳ ವಿಷಯ ನಿನಗೆ ಸ್ತೋತ್ರ ಮಾಡುತ್ತೇವೆ. ನಮ್ಮ ಶರೀರಗಳಿಗೆ ಏನಾದರೂ ಆಪತ್ತು ಬಾರದ ಹಾಗೆ, ನೀನು ನಮ್ಮನ್ನು ಕಾಪಾಡಿ, ನಮ್ಮನ್ನು ಸಂರಕ್ಷಿಸಿ, ನಮಗೆ ಬಲ ಕೊಟ್ಟೆ. ಆದರೆ ನಮ್ಮ ಒಳಮನುಷ್ಯನ ಸ್ಥಿತಿಯನ್ನು ನಾವು ಪರೀಕ್ಷಿಸಿದರೆ, ಬಹಳ ನಾಚಿಕೆಯೂ ಪಶ್ಚಾತ್ತಾಪವೂ ಹುಟ್ಟುತ್ತದೆ; ಯಾಕಂದರೆ ನಾವು ನಿನ್ನ ಶಿಕ್ಷೆಯನ್ನೂ ಉಪದೇಶವನ್ನೂ ತಕ್ಕ ಹಾಗೆ ತಕ್ಕೊಳ್ಳಲಿಲ್ಲ. ನಿನ್ನನ್ನು ಅಗಲಿ, ಪರಿಶುದ್ಧತ್ವವನ್ನೂ ಮುಕ್ತಿಯನ್ನೂ ಕೊಡುವ ನಿನ್ನ ಸನ್ನಿಧಾನಕ್ಕೆ ದೂರವಾದೆವು. ಐಯ್ಯೋ! ನಾವು ನಿನ್ನಲ್ಲಿ ದೃಢವಾಗಿರದೆ, ಒಳ್ಳೇ ಬುದ್ಧಿಯನ್ನು ಬಿಟ್ಟು, ಈ ಲೋಕದ ಮಾಯದಲ್ಲಿ ಭ್ರಮೆಗೊಂಡೆವು. ಇದನ್ನು ಮನ್ನಿಸಿ, ಕೃಪೆಯಾಗಿ ನಮ್ಮನ್ನು ತಿರಿಗಿ ಸತ್ಯ ಮಾರ್ಗದಲ್ಲಿ ಶೇರಿಸು. ನಾವು ಪೂರ್ಣ ಹೃದಯದಿಂದ ನಿನ್ನ ಕಡೆಗೆ ತಿರಿಗಿ ಕೊಂಡು, ನಮಗೆ ಅಗತ್ಯವಾಗಿರುವ ನಿನ್ನ ಕೃಪೆಯನ್ನೂ ಕ್ಷೇಮಕರವಾದ ನಿನ್ನ ದಿವ್ಯ ಸಮಾಧಾನವನ್ನೂ ಹುಡುಕುವ ಹಾಗೆ, ನೀನು ಅವಶ್ಯವಾಗಿರುವ ಆ ಒಂದೇ ಕಾರ್ಯದ ಆಶೆಯನ್ನು ನಮ್ಮ ಹೃದಯಗಳಲ್ಲಿ ಹೆಚ್ಚಿಸು. ನೀನೇ ನಮ್ಮ ಆಶಾಬಂಧವಾಗಿದ್ದಿ, ನಿನ್ನಲ್ಲಿ ಬದುಕುವ ಹಾಗೆ ಸೃಷ್ಟಿಸಲ್ಪಟ್ಟೆವು. ನಿನ್ನಲ್ಲೇ ನಮ್ಮ ಆತ್ಮಕ್ಕೆ ವಿಶ್ರಾಂತಿಯೂ ಕ್ಷೇಮವೂ ಸಂತೋಷವೂ ಶಿಕ್ಕುತ್ತದೆ. ನಿನ್ನ ಅನ್ಯೋನ್ಯವೆಂಬ ಮೋಕ್ಷಸ್ಥಿತಿಯೊಳಗಿಂದ ನಾವು ಸೈತಾನನ ಮೋಸದಿಂದ, ಪಾಪದ ಮೂಲವಾಗಿ, ಬಿದ್ದು ಹೋದೆವು. ನಮ್ಮ ಆತ್ಮಗಳಲ್ಲಿ ಗಲಿಬಿಲಿ ಆಯಿತು. ಬಡ ಮನುಷ್ಯರಾದ ನಾವು ನಮಗೆ ಏನು ಬೇಕೆಂದು, ನೆಟ್ಟಗೆ ತಿಳಿಯದೆ ಇದ್ದೇವೆ. ಇಲ್ಲಿ ಅಲ್ಲಿ ಕ್ಷೇಮವನ್ನು ಹುಡುಕುತ್ತೇವೆ. ಆದರೆ ಅದನ್ನು ನಿನ್ನಲ್ಲಿ ಹುಡುಕದೆ ಇರುವದರಿಂದ, ಅದು ನಮಗೆ ಶಿಕ್ಕವಲ್ಲದು. ಓ ದೇವರೇ, ನಮ್ಮ ಸಹಾಯಕ್ಕೆ ಬಾ, ಇರ ತಕ್ಕ ಸ್ಥಿತಿಯಲ್ಲಿ ನಮ್ಮನ್ನು ತಿರಿಗಿ ಶೇರಿಸು. ಮುಕ್ತಿಯನ್ನು

ಕೊಡುವ ನಿನ್ನ ಅನ್ಯೋನ್ಯದಲ್ಲಿ ನಮ್ಮನ್ನು ಶೇರಿಸಿ, ಕಾಪಾಡು. ನಾವು ಯಾವಾಗಲು ನಿನ್ನ ಮುಂದೆ ಬೆಳಕಿನಲ್ಲಿ ನಡದು ಕೊಳ್ಳುವ ಹಾಗೆಯೂ, ನಮ್ಮ ಪಾಪವನ್ನೂ ನೀಚತನವನ್ನೂ ತಿಳಿಯುವ ಹಾಗೆಯೂ, ನಿನ್ನ ಮಗನಾದ ಯೇಸು ಕ್ರಿಸ್ತನ ರಕ್ತದಿಂದ ಶುದ್ಧರಾಗುವ ಹಾಗೆಯೂ, ನಿನ್ನ ಬೆಳಕಿನಿಂದ ನಮಗೆ ಪ್ರಕಾಶ ಕೊಡು. ನಾವು ನೀರಿನ ಕಾಲಿವೆಗಳ ಮೇಲೆ ನಟ್ಟಿರುವಂಥ ತಕ್ಕ ಕಾಲದಲ್ಲಿ ಫಲ ಕೊಡುವಂಥ ಗಿಡಗಳಾಗುವ ಹಾಗೆಯೂ, ನೀನು ನಮ್ಮನ್ನು ಕಡಿಯದೆ, ಬೆಂಕಿಯಲ್ಲಿ ಹಾಕದೆ, ನಮಗೆ ಹೆಚ್ಚು ಹೆಚ್ಚಾಗಿ ಮೆಚ್ಚುವ ಹಾಗೆಯೂ, ನಾವು ನಿನ್ನ ಮುಂದೆ ನಿತ್ಯವಾಗಿ ಚಿಗಿತು ಬದುಕುವ ಹಾಗೆಯೂ, ನಮಗೆ ಸಹಾಯ ಮಾಡು. ಈ ರಾತ್ರಿಯಲ್ಲಿ ನಮ್ಮ ಶರೀರಾತ್ಮಗಳ ಮೇಲೆ ನಿನ್ನ ಪರಿಶುದ್ಧ ಡಾಲು ಇಟ್ಟು, ನಿನ್ನ ದೊಡ್ಡ ಕರುಣೆಯ ಪ್ರಕಾರ ನಮ್ಮ ಬಿನ್ನಹಗಳನ್ನು ಆಲೈಸು! ಆಮೆನ್.

---

## ಶುಕ್ರವಾರದ ಮುಂಜಾನೆ.

ಕರ್ತನೇ, ರಾತ್ರಿ ಕಳದು ಹೋಗಿದೆ; ಲೋಕದ ಬೆಳಕು ತಿರಿಗಿ ನಮಗೆ ಪ್ರಕಾಶ ಕೊಟ್ಟು, ಕೆಲಸಕ್ಕಾಗಿ ನಮ್ಮನ್ನು ಎಬ್ಬಿಸುತ್ತದೆ. ನಾವು ನಿದ್ರೆ ಮಾಡುವಾಗ ನೀನು ನಮ್ಮನ್ನು ಕಾಪಾಡಿದದರಿಂದಲೂ, ನಮ್ಮ ಕೆಲಸಗಳನ್ನು ತಿರಿಗಿ ಆರಂಭಿಸುವದಕ್ಕೆ ಹೊಸ ತ್ರಾಣವನ್ನು ಕೊಟ್ಟದರಿಂದಲೂ ನಿನಗೆ ಸ್ತೋತ್ರ ಮಾಡುತ್ತೇವೆ. ಕರ್ತನಾದ ಯೇಸುವೆ, ಒಂದು ಶುಕ್ರವಾರ ದಿವಸದಲ್ಲಿ ನೀನು ನಮ್ಮ ಪಾಪಗಳ ನಿಮಿತ್ತ ಕಠಿಣವಾದ ಶ್ರಮೆ ಸೈರಿಸಿ, ಭಯಂಕರವಾದ ಮರಣವೆಂಬ ಸ್ನಾನವನ್ನು ಹೊಂದಿದಿ. ನೀನು ನಮಗಾಗಿ ಕ್ರೂಜೆಯಲ್ಲಿ ಸತ್ತಿ ಎಂಬುವದನ್ನು ಈ ಹೊತ್ತು ವಿಶೇಷವಾಗಿ ನಮ್ಮ ನೆನಪಿಗೆ ತಾ. ನಿನ್ನ ಶ್ರಮೆಗಳ ಅನ್ಯೋನ್ಯದಲ್ಲಿಯೂ ನಿನ್ನ ಮರಣದ ಸಾರೂಪ್ಯದಲ್ಲಿಯೂ ನ

ಮ್ಮನ್ನು ಶೇರಿಸು. ನಿನ್ನ ಮರಣದ ಅನುಭವದಿಂದ ಪಶ್ಚಾತ್ತಾ ಪವಿಲ್ಲದ ನಮ್ಮ ಹಳೇ ಭಾವವನ್ನು ಕೊಂದು ಹಾಕು. ನಿನ್ನ ಕ್ರೂಜೆಯನ್ನು ನೆನಸುವಾಗ ನಮ್ಮ ಹೃದಯಗಳು ಕರಗಿ ಹೋ ಗುವ ಹಾಗೆಯೂ, ನಾವು ನಿದ್ರೆ ತಿಳಿದು, ಪಾಪದಿಂದ ಎಚ್ಚರ ರವಾಗಿ, ಸತ್ಯ ಪಶ್ಚಾತ್ತಾಪದಿಂದ ತುಂಬುವ ಹಾಗೆಯೂ, ಮಾ ಡು. ಪಾಪವೇನೆಂದು ನಾವು ತಿಳಿದು, ಪಾಪವನ್ನು ಸತ್ಯವಾಗಿ ಅಸಂಹಿಸುವ ಹಾಗೆ, ನಮಗೆ ಸಹಾಯ ಮಾಡು. ಇದಲ್ಲದೆ ಪ ರಿಶುದ್ಧವಾದ ನಿನ್ನ ಘಾಯಗಳನ್ನೂ ಭಲ್ಲೆ ತಿವಿದ ನಿನ್ನ ಹೃದಯ ವನ್ನೂ ನಾವು ಸ್ಮರಿಸುವಲ್ಲಿ, ನಿನ್ನ ಪ್ರೀತಿಯನ್ನೂ ಪರಲೋಕದ ಲ್ಲಿರುವ ನಿನ್ನ ನಮ್ಮ ತಂದೆಯ ಪ್ರೀತಿಯನ್ನೂ ನಮಗೆ ಹೆಚ್ಚಾಗಿ ಪ್ರಕಟ ಮಾಡು. ಪಾಪಿಷ್ಠರು ಸಾಯ ಬೇಕೆಂದಲ್ಲಾ, ಅವರು ತಿರಿಗಿ ಕೊಂಡು ಬದುಕ ಬೇಕೆಂದು, ಪರಲೋಕದಲ್ಲಿರುವ ತಂ ದೆಗೆ ಮನಸ್ಸುಂಟು. ಈ ಪ್ರೀತಿಯ ಆಲೋಚನೆ ಎಷ್ಟೋ ದೊ ಡ್ಡದು! ಕರ್ತನಾದ ಯೇಸುವೆ, ನಿನ್ನ ಹೆಸರಿನಲ್ಲಿ ನಾವು ಸಹ ಪಾ ಪಪರಿಹಾರವನ್ನು ಹೊಂದ ಬೇಕು. ಹೀಗಿರುವದರಿಂದ ನಮ್ಮ ಮೇಲೆಯೂ ನಿನ್ನ ಕೃಪೆಯನ್ನು ಹೊಯಿದು, ನಿನ್ನ ರಕ್ತದಿಂದ ನಮ್ಮನ್ನು ತೊಳದು, ಶುದ್ಧ ಮಾಡು. ನಿನ್ನ ಕ್ರೂಜೆಯ ಸ್ಮರಣೆ ಯಿಂದ ನಮ್ಮನ್ನು ನಿನ್ನ ನಿತ್ಯ ಪ್ರೀತಿಯ ಐಕ್ಯದಲ್ಲಿ ಶೇರಿಸು. ನೀನೇ ನಮ್ಮನ್ನು ನಿನ್ನ ರಕ್ತದಿಂದ ಕೊಂಡು ಕೊಂಡಿ. ನಾವು ಸದಾಕಾಲ ನಿನ್ನವರಾಗಿದ್ದೇವೆ. ನೀನು ಮರಣದ ಪರ್ಯಂತ ರ ನಮ್ಮನ್ನು ಪ್ರೀತಿ ಮಾಡಿದಿ. ನಾವು ಸಹ ಸಾಯುವ ವರೆ ಗೂ ನಿನ್ನನ್ನು ಪ್ರೀತಿ ಮಾಡ ಮನಸ್ಸಾಗಿದ್ದೇವೆ. ಇದಕ್ಕಾಗಿ ನ ಮಗೆ ಸಹಾಯ ಮಾಡು, ಇದರಲ್ಲಿಯೇ ನಮ್ಮನ್ನು ಈ ಹೊತ್ತು ಸಹ ದೃಢವಾಗಿ ಕಾಪಾಡು. ನಮಗೆ ಯಾವ ಮೋಸವು ಆಗ ದ ಹಾಗೆಯೂ, ನಾವು ನಿನಗೆ ದೂರವಾಗದ ಹಾಗೆಯೂ, ನ ಮ್ಮ ಶರೀರಾತ್ಮಗಳನ್ನು ಕಾಪಾಡು. ನಮ್ಮ ನೆಂಟರಿಷ್ಟರನ್ನೂ ಆ ಶೀರ್ವದಿಸು. ನಮಗೆ ಅಗತ್ಯವಾಗಿರುವವುಗಳನ್ನು ದಯ ಪಾ

ಲಿಸು. ಎಲ್ಲಾ ಸಭೆಗಳನ್ನು ಹೆಚ್ಚಿಸಿ, ಪರಿಶುದ್ಧ ಮಾಡು. ಸಾಲೆಗಳಲ್ಲಿ ಕಲಿಯುವ ಹುಡುಗರನ್ನು ನಿನ್ನ ಪ್ರೀತಿಯಲ್ಲಿಯೂ ಭಯದಲ್ಲಿಯೂ ಬೆಳೆಯ ಮಾಡು. ಕ್ರೈಸ್ತರಲ್ಲಿಯೂ, ಯೆಹೂದ್ಯರಲ್ಲಿಯೂ, ವಿಗ್ರಹಾರಾಧಕರಲ್ಲಿಯೂ, ನಿನ್ನ ಸತ್ಯ ಭಕ್ತರ ಲೆಖ್ಖವನ್ನು ಹೆಚ್ಚಿಸು. ನೀನು ಕ್ರೂಜೆಯಲ್ಲಿ ನಮಗಾಗಿ ಶ್ರಮೆ ತಾಳಿದ ಸಮಾಚಾರವು ಎಲ್ಲಾ ಲೋಕದಲ್ಲಿ ಹಬ್ಬಿ, ಮನುಷ್ಯರ ಹೃದಯಗಳಲ್ಲಿ ಪ್ರಕಾಶ ಕೊಟ್ಟು, ಅನೇಕರನ್ನು ರಕ್ಷಿಸುವ ಹಾಗೆ ಮಾಡು. ಓ ಕರ್ತನಾದ ಯೇಸುವೆ, ಉದ್ಧಾರ ಮಾಡು. ನಿನ್ನ ಹೆಸರಿನ ಮಹಿಮೆಗಾಗಿ ನಮ್ಮನ್ನು ಆಲೈಸು! ಆಮೆನ್.

---

## ಶುಕ್ರವಾರದ ಸಂಜೆಗೆ.

ಕರುಣೆಯುಳ್ಳ ನಮ್ಮ ಕರ್ತನಾದ ದೇವರೇ, ನಿನ್ನ ನಾಮವನ್ನು ಸ್ತುತಿಸುವದಕ್ಕೆ ನಮಗೆ ಈ ಹೊತ್ತು ಬಹಳ ಆಸ್ಪದವಾಯಿತು. ನಾವು ಮುಂಜಾನೆ ನಿನ್ನ ಕೃಪೆಯನ್ನೂ ಸಂಜೆಗೆ ನಿನ್ನ ಸತ್ಯವನ್ನೂ ಸಾರ ಬೇಕು. ಹೌದು, ನೀನು ಈ ಹಗಲಲ್ಲಿಯೂ ಚಂಚಲವಿಲ್ಲದ ನಿನ್ನ ಕೃಪೆ ಅಂತಃಕರಣಗಳನ್ನು ನಮ್ಮಲ್ಲಿಯೂ ನಮ್ಮವರೆಲ್ಲರಲ್ಲಿಯೂ ಪ್ರತ್ಯಕ್ಷ ಮಾಡಿದ್ಧೀ. ನಾವು ನಂಬಿಗೆ ಇಲ್ಲದವರು, ನೀನು ನಂಬಿಗೆಯುಳ್ಳವನು. ಈ ಹಗಲಲ್ಲಿಯೂ ನಾವು ಅನೇಕ ಪ್ರಕಾರದಿಂದ ನಿನಗೆ ನಂಬಿಗೆ ಇಲ್ಲದವರಾದೆವು. ಇದನ್ನು ನೀನು ಮಿತಿಯಿಲ್ಲದ ನಿನ್ನ ದೀರ್ಘಶಾಂತಿಯ ಪ್ರಕಾರ ಮನ್ನಿಸು. ಕರ್ತನಾದ ಯೇಸುವೇ, ನೀನು ನಿನ್ನ ಜನರಿಗೆ ಉತ್ತಮ ವೈದ್ಯನಾಗಿದ್ಧಿ. ನಿನ್ನ ಭಕ್ತರ ಆತ್ಮ ಶರೀರಗಳನ್ನು ತೊಳೆದು, ಪಾಪವೆಂಬ ಮೈಲಿಗೆಯನ್ನು ಪರಿಹರಿಸಿ, ಶುದ್ಧ ಮಾಡುತ್ತಿ. ಇದಲ್ಲದೆ ಬಹಳ ತಾಳ್ಮೆಯಿಂದಲೂ ವಿನಯದಿಂದಲೂ ಅವರ ಪಾದಗಳನ್ನು ತೊಳೆಯುತ್ತಿ. ಈ ಪ್ರಕಾರ ನಮಗೂ ಈ ಹೊತ್ತು ಮಾಡು. ಮುಖ್ಯವಾಗಿ ನಾವು ಯಾವ ಪಾಪದ ಕಳಂಕದಿಂದ ಅಶುದ್ಧರಾ

ದೆವೆಂಬುವದನ್ನು ನಮಗೆ ಚನ್ನಾಗಿ ತಿಳಿಸು. ನಿನ್ನ ಬೆಳಕಿನಲ್ಲಿ ಶೇರಲಾರದ ಎಲ್ಲಾ ಅಶುದ್ಧ ಕಾರ್ಯಗಳನ್ನು ನಾವು ಹೆಚ್ಚು ಹೆಚ್ಚಾಗಿ ತಿಳಿದು, ಅಸಂಹಿಸುವ ಹಾಗೆ, ನಮ್ಮನ್ನು ಬೋಧಿಸು. ಒಳಗಿನ ಮನುಷ್ಯನನ್ನು ಶುದ್ಧ ಮಾಡಿ ಕೊಳ್ಳುವ ಹಾಗೆಯೂ, ನಿನ್ನ ಬೆಳಕಿನಲ್ಲಿ ನಮ್ಮ ಆತ್ಮಗಳನ್ನೂ ಮನಸ್ಸಾಕ್ಷಿಗಳನ್ನೂ ಕಾಪಾಡಿ ಕೊಳ್ಳುವ ಹಾಗೆಯೂ, ನಮ್ಮನ್ನು ಎಚ್ಚರಿಸು. ನೀನು ಪೂರ್ಣವಾಗಿ ಶುದ್ಧ ಪ್ರಕಾಶಕರವಾದ ಬೆಳಕಾಗಿದ್ಧಿ. ನಮ್ಮನ್ನು ಹೊಸದಾಗಿ ಹುಟ್ಟಿಸಿ, ನಿನ್ನ ದಿನದಲ್ಲಿ ರಕ್ಷಿಸು. ಬೆಳಕಿನ ಮಕ್ಕಳಾಗಿ ನಿರ್ಮಲವಾದ ಬೆಳಕಿನಲ್ಲಿ ನಡಕೊಳ್ಳುವ ಹಾಗೆ, ನಮಗೆ ಸಹಾಯ ಮಾಡು. ನೀನೇ ಲೋಕದ ಬೆಳಕಾಗಿದ್ಧಿ. ನಿನ್ನ ಕಿರಣಗಳು ಭೂಮಿಯಲ್ಲೆಲ್ಲಾ ಪ್ರಕಾಶ ಕೊಟ್ಟು, ಎಲ್ಲಾ ಕತ್ತಲೆಯನ್ನು ಓಡಿಸುವ ಹಾಗೆ, ಮಾಡು. ಸಕಲ ಸ್ಥಳಗಳಲ್ಲಿರುವ ನಿನ್ನ ಭಕ್ತರನ್ನು ಜ್ಞಾಪಕ ಮಾಡಿ ಕೊಂಡು, ಅವರು ಅಂಧಕಾರವುಳ್ಳ ಈ ಲೋಕದಲ್ಲಿ ಬೆಳಕುಗಳಂತೆ ಪ್ರಕಾಶ ಕೊಡುವ ಹಾಗೆ, ಮಾಡು. ನಿನ್ನ ಭಕ್ತರೆಲ್ಲರಲ್ಲಿ ನಿನ್ನ ಕ್ರಿಯೆಗಳನ್ನು ಸಾಗಿಸು. ಅವರು ಸೈರಿಸುವ ಶ್ರಮೆಗಳಿಂದ ಅವರಿಗೆ ಆಶೀರ್ವಾದ ಬರುವ ಹಾಗೆ ಮಾಡು. ಕಡೆಯಲ್ಲಿ ನೀನು ಜಯಿಸಿದ ಪ್ರಕಾರ ಅವರಿಗೂ ಜಯವನ್ನು ಕೊಡು. ರೋಗದಲ್ಲಿ ಬಿದ್ದಿರುವ ನಿನ್ನ ಜನರನ್ನೂ ಸಾಯುವದಕ್ಕೆ ಸಮಿಾಪವಾಗಿರುವವರನ್ನೂ ಈ ರಾತ್ರಿಯಲ್ಲಿ ವಿಶೇಷವಾಗಿ ಜ್ಞಾಪಕ ಮಾಡಿಕೋ. ಸತ್ಯವೂ ಜೀವವೂ ಆಗಿರುವ ನಿನ್ನ ಮಾರ್ಗದಲ್ಲಿ ನಮ್ಮನ್ನು ಮುಂದೆ ಮುಂದಕ್ಕೆ ನಡಿಸು. ನಾವು ನಮ್ಮ ಜೀವದ ಅಂತ್ಯವನ್ನು ಯಾವಾಗಲೂ ನಮ್ಮ ಕಣ್ಣುಗಳ ಮುಂದೆ ಇಟ್ಟು ಕೊಳ್ಳುವ ಹಾಗೆಯೂ, ಅದಕ್ಕಾಗಿ ನಮ್ಮನ್ನು ಸಿದ್ಧ ಮಾಡಿ ಕೊಳ್ಳುವ ಹಾಗೆಯೂ, ನಮ್ಮನ್ನು ಎಚ್ಚರಿಸು. ನಮ್ಮ ಕಡೇ ಘಳಿಗೆ ಬರುವಾಗ, ನಂಬಿಗೆಯುಳ್ಳ ನಿನ್ನ ಕೈಯಿಂದ ನಮ್ಮನ್ನು ಹಿಡುಕೋ. ನೀನೇ ನಮ್ಮ ಸಮಿಾಪದಲ್ಲಿರುತ್ತಿ ಎಂಬ ಭರವಸವಾದ ಅನುಭವವನ್ನು ಕೊಟ್ಟು, ನಿತ್ಯವಾದ ವಿಶ್ರಾಂತಿಯ

ಲ್ಲಿ ಕೃಪೆಯಾಗಿ ನಮ್ಮನ್ನು ಶೇರಿಸು. ನೀನು ಜೀವದಲ್ಲಿಯೂ ಮರಣದಲ್ಲಿಯೂ ನಮಗೆ ರಕ್ಷಕನಾಗಿರುವದರಿಂದ ನಮಗೆ ಎಷ್ಟೋ ಸುಖ! ಕರ್ತನಾದ ಯೇಸುವೇ, ನಿನ್ನ ಮಹಿಮೆಯುಳ್ಳ ಹೆಸರಿಗೆ ನಮ್ಮಿಂದಲೂ ಎಲ್ಲರಿಂದಲೂ ನಿತ್ಯ ಸ್ತೋತ್ರ ಉಂಟಾಗಲಿ! ಆಮೆನ್.

---

## ಶನಿವಾರದ ಮುಂಜಾನೆ.

ದೇವರೇ, ನಿನ್ನ ಕೃಪೆಯ ಸಹಾಯದಿಂದ ವಾರದ ಕಡೇ ದಿವಸಕ್ಕೆ ಮುಟ್ಟಿದೆವು. ಕಳದ ರಾತ್ರಿಯಲ್ಲಿಯೂ ಕಳದ ಸಪ್ತಕದಲ್ಲಿಯೂ ನೀನು ನಮಗೆ ಐಶ್ವರ್ಯವಾದ ಕೃಪೆ ಕರುಣೆಗಳನ್ನು ಅನುಭವಿಸ ಮಾಡಿದದರಿಂದ, ನಿನಗೆ ಸ್ತೋತ್ರ ಮಾಡುತ್ತೇವೆ. ನೀನು ಸರ್ವ ಲೋಕವನ್ನೂ ಮನುಷ್ಯರಾದ ನಮ್ಮನ್ನೂ ನಿರ್ಮಿಸಿದ ಮೇಲೆ, ಮೊದಲನೇ ಶನಿವಾರ ದಿವಸದಲ್ಲಿ ವಿಶ್ರಾಂತಿಯಾದಿ. ಎಲ್ಲಾನ್ನು ನಿರ್ಮಿಸಿದವನೇ, ನೀನು ನಮ್ಮನ್ನು ಮನುಷ್ಯರಾಗಿ ನಿರ್ಮಿಸಿ, ನಮಗೆ ಘನವುಳ್ಳ ಸ್ಥಿತಿಯನ್ನು ಕೊಟ್ಟು, ನಾವು ನಿನ್ನ ಹೋಲ್ವಿಕೆಯಾಗಿರ ಬೇಕೆಂಬ ಮಹಿಮೆಯನ್ನು ನಮಗೆ ನೇಮಕ ಮಾಡಿದದರಿಂದ, ವಿನಯವಾಗಿ ನಿನ್ನನ್ನು ಕೊಂಡಾಡುತ್ತೇವೆ. ನಾವು ನಿನ್ನ ನಾಮಕ್ಕೂ ನಿನ್ನ ಪರಿಶುದ್ಧ ಆತ್ಮಕ್ಕೂ ಮಂದಿರಗಳಾಗ ಬೇಕೆಂಬುವದು ನಿನ್ನ ಚಿತ್ತವದೆ. ಅಕಟ, ನಿನಗೆ ತಕ್ಕ ಸ್ತೋತ್ರ ಮಾಡುವದು ಹ್ಯಾಗೆ? ನೀನು ಆದಿಯಲ್ಲಿ ನಮಗೆ ಕೊಟ್ಟ ಮಹಿಮೆಯನ್ನು ನಾವು ಕಳಕೊಂಡೆವು; ಪಾಪಿಷ್ಟರಾಗಿ ದೇವರ ಮಹಿಮೆ ಇಲ್ಲದವರಾದೆವು. ಆದರೆ ನೀನು ನಮ್ಮ ಮೇಲೆ ಅನುಗ್ರಹವಿಟ್ಟು, ನಿನ್ನ ಸ್ವರೂಪವಾದ ನಿನ್ನ ಮಗನಲ್ಲಿ ನಮ್ಮ ಬಳಿಗೆ ಬಂದು, ಪಾಪದ ಶಾಪದಲ್ಲಿ ಬಿದ್ದ ನಮ್ಮನ್ನು ನಿನ್ನ ಅನ್ಯೋನ್ಯದಲ್ಲಿ ತಿರಿಗಿ ಶೇರಿಸಿ, ನಮ್ಮಲ್ಲಿ ವಾಸ ಮಾಡಿ, ನಮ್ಮನ್ನು ನಿನ್ನ ಮಹಿಮೆಯಿಂದ ತುಂಬ ಮನಸ್ಸಾಗಿರುತ್ತಿ. ಇದಕ್ಕಾಗಿ ಇಂದಿ

ನ ದಿವಸವನ್ನು ಸಹಾ ಆಶೀರ್ವದಿಸು. ನೀನು ನಮ್ಮಲ್ಲಿ ನಡಿಸುವ ಕೃಪೆಯ ಕೆಲಸವನ್ನು ತಡಿಸದೆ, ನಿನಗೂ ನಿನ್ನ ಪರಿಶುದ್ಧಾತ್ಮಕ್ಕೂ ಒಳಗಾಗಿರುವ ಹಾಗೆ ನಮ್ಮನ್ನು ಕಾಪಾಡು. ಕರ್ತನಾದ ಯೇಸುವೇ, ನಿನ್ನ ಜೀವವು ಕ್ರೂಜೆಯಲ್ಲಿ ತೀರಿ ಹೋಗುವಾಗ, ಪರಲೋಕದಲ್ಲಿರುವ ತಂದೆಯು ನಿನಗೆ ಒಪ್ಪಿಸಿದ ಕೆಲಸವು ತೀರಿತೆಂದು ಹೇಳಿದಿಯಲ್ಲ? ನೀನು ತೋರಿಸಿದ ಮಾದರಿಯನ್ನು ಅನುಸರಿಸುವ ಹಾಗೆ, ನಿನ್ನ ನಂಬಿಗೆಯನ್ನೂ ನಿನ್ನ ಆಸಕ್ತಿಯನ್ನೂ ಲಕ್ಷಿಸುವದಕ್ಕೆ ನಮಗೆ ಬುದ್ಧಿ ಕೊಡು. ನಮಗೂ ಈ ಲೋಕದಲ್ಲಿ ಒಂದು ಕೆಲಸವು ಒಪ್ಪಿಸಿಯದೆ. ಅದನ್ನು ಸಪ್ತಕ ಸಪ್ತಕದಲ್ಲಿಯೂ ದಿನ ದಿನದಲ್ಲಿಯೂ ಪೂರೈಸ ಬೇಕು. ಐಯ್ಯೋ, ನಿನ್ನ ಹಾಗೆ ನಾವು ನಂಬಿಗೆಯುಳ್ಳವರೂ ಆಸಕ್ತಿಯುಳ್ಳವರೂ ಆಗಿದ್ದು, ನಮ್ಮ ಕೆಲಸಗಳನ್ನೆಲ್ಲಾ ತಕ್ಕ ಹಾಗೆ ಮಾಡಿ, ನಮಗೆ ಒಪ್ಪಿಸಿದ್ದನ್ನೆಲ್ಲಾ ಚನ್ನಾಗಿ ಪರಾಮರಿಸಿ, ನಿನಗೆ ಸೇವೆ ಮಾಡಿ, ವಿಧೇಯರಾಗಿದ್ದು, ನಿನ್ನನ್ನು ಹಿಂಬಾಲಿಸಿ, ಸುಖಕರವಾದ ನಿನ್ನ ಅನ್ಯೋನ್ಯದಿಂದ ನಿನ್ನ ಸಾರೂಪ್ಯವನ್ನು ಹೊಂದಿ, ನಮ್ಮ ಆದಿ ತಂದೆಗಿದ್ದ ಘನವನ್ನೂ ಮಹಿಮೆಯ ಆತ್ಮವನ್ನೂ ತಿರಿಗಿ ಪಡಕೊಂಡು, ಇಹಲೋಕದಲ್ಲಿ ಪರಲೋಕದ ತಂದೆಯ ಮನೆಗೆ ಸಿದ್ಧರಾದರೆ, ಎಷ್ಟೋ ಚಲೋದು! ಇದಕ್ಕಾಗಿ ನಿನ್ನ ಪ್ರೀತಿ ಅಂತಃಕರಣಗಳ ನಿಮಿತ್ತ ಈ ದಿವಸವನ್ನು ಆಶೀರ್ವದಿಸು! ಆಮೆನ್.

---

## ಶನಿವಾರದ ಸಂಜೆಗೆ.

ಈ ವಾರದ ಕಡೇ ದಿವಸ ಈಗ ತೀರಿ ಹೋಗುವದರಿಂದ, ಕರ್ತನಾದ ದೇವರೇ, ನಿನ್ನ ಮುಂದೆ ಬಂದು, ಮೊಣಕಾಲೂರಿ, ನಮ್ಮೆಲ್ಲರಿಗಾಗಿ ಕರುಣೆಯನ್ನು ಬೇಡಿ ಕೊಂಡು, ನೀನು ಈ ಪರ್ಯಂತರ ನಮಗೆ ಮಾಡಿದ ಕೃಪೆಯ ವಿಷಯದಲ್ಲಿ ನಿನಗೆ ಸ್ತೋತ್ರ ಮಾಡುತ್ತೇವೆ. ಈ ಪರ್ಯಂತರ ನೀನು ನಮ್ಮನ್ನು ಸಂರಕ್ಷಿ

ಸಿದ್ಧಿ. ಈ ವರೆಗೂ ನಮ್ಮನ್ನು ತಾಳಿದ್ಧಿ, ನಮ್ಮ ಅವಿಶ್ವಾಸವನ್ನೂ ಪಾಪವನ್ನೂ ಎಲ್ಲಾ ಸೈರಿಸಿದ್ಧಿ. ಈ ಜೀವದ ಎಲ್ಲಾ ಉಪದ್ರಗಳಲ್ಲಿ ನಮಗೆ ಇಂದಿನ ವರೆಗೂ ಸಹಾಯ ಮಾಡಿ, ನಮ್ಮ ಶರೀರಾತ್ಮಗಳಿಗೆ ಅಗತ್ಯವಾದವುಗಳನ್ನು ದಯ ಪಾಲಿಸಿ, ಅನೇಕ ಉಪಕಾರಗಳನ್ನು ನಮಗೆ ಮಾಡಿ, ನಮ್ಮನ್ನು ಆಶೀರ್ವದಿಸಿ, ನಮಗೆ ಸಂತೋಷವನ್ನುಂಟು ಮಾಡಿದ್ಧಿ. ನಿನ್ನ ಎಲ್ಲಾ ಕೃಪೆಯ ವಿಷಯದಲ್ಲಿ ನಿನಗೆ ನಿತ್ಯ ಸ್ತೋತ್ರವಾಗಲಿ! ಮುಖ್ಯವಾಗಿ ನಮಗೆ ಈ ಪರ್ಯಂತರ ನಮ್ಮ ಆತ್ಮಗಳ ರಕ್ಷಣ್ಯಕ್ಕಾಗಿ ಸಮಯ ಕೊಟ್ಟು, ಮರಣಕ್ಕಾಗಿಯೂ ಆ ಲೋಕಕ್ಕಾಗಿಯೂ ನಮ್ಮನ್ನು ಸಿದ್ಧ ಮಾಡಿ ಕೊಳ್ಳುವದಕ್ಕೆ ನಮಗೆ ಆಸ್ಪದ ಕೊಟ್ಟದರಿಂದ, ನಿನ್ನನ್ನು ಸ್ತುತಿಸುತ್ತೇವೆ. ಈ ಪರ್ಯಂತರ ಮಾಡದೆ ಬಿಟ್ಟದ್ದನ್ನೂ ಮಾಡಿದ ತಪ್ಪುಗಳನ್ನೂ ಮುಖ್ಯವಾಗಿ ಹೋದ ಸಪ್ತಕದಲ್ಲಿ ನಾವು ನಡಿಸಿದ ಪಾಪಗಳನ್ನೂ ತಿಳಿದು, ಅರಿಕೆ ಮಾಡುವದಕ್ಕೆ, ಕೃಪೆಯನ್ನು ಕೊಡು. ಕರ್ತನಾದ ಯೇಸುವೇ, ನಿನ್ನ ಪರಿಶುದ್ಧ ರಕ್ತವನ್ನು ನಮ್ಮ ನಡತೆ ಎಲ್ಲಾದರ ಮೇಲೆಯೂ ವಿಶೇಷವಾಗಿ ಕಳದ ಸಪ್ತಕದಲ್ಲಿ ನಾವು ಮಾಡಿದ ಕೆಲಸಗಳ ಮೇಲೆಯೂ ತಳಿಸಿ, ನಮ್ಮ ಪಾಪಗಳನ್ನೆಲ್ಲಾ ಪರಿಹರಿಸಿ, ಎಲ್ಲಾನ್ನು ಶುದ್ಧ ಮಾಡು. ಇದಲ್ಲದೆ ಹೆಚ್ಚಾಗಿ ಮಾಡ ತಕ್ಕದ್ದನ್ನೂ ನಮ್ಮಲ್ಲಿ ಕೊರತೆಯಾಗಿರುವದನ್ನೂ ನಮಗೆ ತೋರಿಸು. ಐಯ್ಯೋ! ನಮ್ಮಲ್ಲಿ ಬಹಳ ಕೊರತೆ ಅದೆ. ನಮಗೆ ಉಳಿದಿರುವ ಕಾಲ ಒಂದು ವೇಳೆ ಸ್ವಲ್ಪವಾದದ್ದು. ಹೆಚ್ಚಾಗಿದ್ದರೂ ನಮಗೆ ಬರುವ ಸಮಯವೆಲ್ಲಾ ತೀವ್ರವಾಗಿ ಕಳದು ಹೋಗುವಂಥಾದ್ದು; ನಾವು ಸಮಯವನ್ನು ಕೊಂಡು ಕೊಳ್ಳುವ ಹಾಗೆಯೂ, ಅದನ್ನು ಚನ್ನಾಗಿ ಪ್ರಯೋಗಿಸುವ ಹಾಗೆಯೂ, ನಮಗೆ ಬುದ್ಧಿ ಕೊಡು. ಈ ಜೀವದಲ್ಲಿಯೂ ನಾವು ನಿನ್ನನ್ನು ಅರಿತು, ನಿನ್ನ ಹೆಸರನ್ನು ಕೈಲಾಗುವ ಮಟ್ಟಿಗೂ ಮಹಿಮೆ ಪಡಿಸ ಬೇಕು. ನಾವು ದೇವರಿಗೆಅನ್ಯೋನ್ಯರೂ ಶುದ್ಧ ಮನಸ್ಸಾಕ್ಷಿಯುಳ್ಳವರೂ ಸಂಪೂರ್ಣರೂ

ಆಗ ಬೇಕು. ನಿನ್ನ ಪ್ರೀತಿಯ ಐಕ್ಯದಲ್ಲಿ ಶೇರಿ, ನಿನ್ನ ಆಜ್ಞೆ
ಗಳನ್ನು ಕೈಕೊಳ್ಳ ಬೇಕು. ದೇವರಿಗೂ ಮನುಷ್ಯರಿಗೂ ಪ್ರೀತಿ
ಮಾಡಿ, ಪರದಲ್ಲಿ ಪೈರು ಕೊಯ್ಯುವ ಹಾಗೆ, ಇಹದಲ್ಲಿ ಒಳ್ಳೇ
ಬೀಜ ಬಿತ್ತ ಬೇಕು. ಇದು ನಮಗೆ ನೀನು ನೇಮಿಸಿದ ಕೆಲಸ
ವಾಗಿದೆ. ಜ್ಞಾನಪ್ರಿಯರಾಗಿದ್ದು, ಆತ್ಮದ ರಕ್ಷಣ್ಯವನ್ನು ಪಡ
ಕೊಳ್ಳ ಮನಸ್ಸಾಗಿದ್ದರೆ, ಇದನ್ನು ಮಾಡುವದರಲ್ಲಿ ಆಸಕ್ತರಾಗಿ
ರ ಬೇಕು. ನೀನು ನಿನ್ನ ಕೆಲಸವನ್ನು ಪೂರೈಸಿದ ಪ್ರಕಾರ ನಾವು
ಸಹಾ ನಮ್ಮ ಕೆಲಸವನ್ನು ಚನ್ನಾಗಿ ಮಾಡಿ ಪೂರೈಸುವ ಹಾಗೆ,
ನಮಗೆ ಸಹಾಯ ಮಾಡು. ನಮ್ಮ ಚಿಂತೆಗಳನ್ನೆಲ್ಲಾ ನಿನ್ನ ಮೇ
ಲೆ ಹಾಕುತ್ತೇವೆ. ನಮ್ಮ ಮನೆಯವರನ್ನೂ ನೆಂಟರಿಷ್ಟರನ್ನೂ
ನಮ್ಮ ಸಂಗಡ ಆತ್ಮದ ಐಕ್ಯದಲ್ಲಿರುವ ಎಲ್ಲಾ ಪ್ರಿಯರನ್ನೂ ಪ
ರಾಮರಿಸಿ ಆಶೀರ್ವದಿಸು. ರಾಜರು ಮುಂತಾದ ಅಧಿಕಾರಸ್ಥ
ರೆಲ್ಲರನ್ನು ಕಾಪಾಡು. ಎಲ್ಲಾ ಸಭೆಗಳನ್ನು ಕೃಪೆಯಾಗಿ ಆಳಿ
ಕೊಂಡು, ಬೆಳಿಸು. ಶ್ರಮೆಗಳಲ್ಲಿಯೂ ರೋಗಗಳಲ್ಲಿಯೂ ಬಿ
ದ್ದವರೆಲ್ಲರನ್ನು ಈ ರಾತ್ರಿಯಲ್ಲಿ ನೆನಪು ಮಾಡಿಕೋ. ಪ್ರೀತಿ
ಯುಳ್ಳ ಕರ್ತನಾದ ರಕ್ಷಕನೇ, ನಮಗೂ ನಮಗೆ ಪ್ರಿಯರಾಗಿ
ರುವವರೆಲ್ಲರಿಗೂ ಈ ರಾತ್ರಿಯಲ್ಲಿ ಸರ್ವತ್ರಾಣ ಉಳ್ಳ ನಿನ್ನ ಆ
ಶ್ರಯವನ್ನು ಕೊಡು. ನಿನ್ನ ಬಳಿಯಲ್ಲಿ ಇದ್ದರೆ, ಸುರಕ್ಷಿತರಾಗಿ
ಕ್ಷೇಮದಲ್ಲಿ ಇದ್ದೇವೆ. ನೀನೊಬ್ಬನೇ ನಮಗಿದ್ದರೆ, ನಮಗೆ ಎ
ಲ್ಲಾ ಶಿಕ್ಕಿದ ಹಾಗಾಗಿದೆ. ನಿನ್ನಲ್ಲಿಯೇ ನಾವು ನಿತ್ಯವಾಗಿ ಭರ
ವಸವಿಡುತ್ತೇವೆ! ಆಮೆನ್.



## ಮೂರನೇ ವಾರದ

# ಪ್ರಾರ್ಥನೆಗಳು.

### ಆದಿತ್ಯವಾರದ ಮುಂಜಾನೆ.

ಕರ್ತನಾದ ದೇವರೇ, ನೀನು ಬೆಳಕು; ನಿನ್ನಲ್ಲಿ ಕತ್ತಲೇನೂ ಇಲ್ಲ.* ನಿನ್ನ ಪ್ರಿಯ ಮಗನು ಲೋಕದ ಬೆಳಕಾದನು. ಆತನನ್ನು ಹಿಂಬಾಲಿಸುವವನು ಕತ್ತಲೆಯಲ್ಲಿ ನಡಿಯನು; ಅವನು ಜೀವದ ಬೆಳಕನ್ನು ಪಡಕೊಳ್ಳುವನು.† ಈ ಮುಂಜಾನೆಯಲ್ಲಿ ನನ್ನನ್ನು ನಡಿಸ ತಕ್ಕ ನಿನ್ನ ಬೆಳಕನ್ನೂ ಸತ್ಯವನ್ನೂ ಕಳುಹು. ಇಂದು ನಾನು ಕೇಳುವ ವಾಕ್ಯವು ನನ್ನ ಅಡಿಗೆ ದೀಪವೂ ನನ್ನ ಕಾಲಿಗೆ ಬೆಳಕೂ ಆಗಲಿ! ನಾನು ಎಂಥವನೆಂತ ನೋಡಿ, ಆತ್ಮಸ್ತುತಿಯನ್ನು ಕಿತ್ತು, ಆತ್ಮವಂಚನೆಯನ್ನೆಲ್ಲಾ ಅಳಿಸಿ ಬಿಡುವ ಹಾಗೆ, ನನಗೆ ಕಣ್ದೆರೆ. ನನ್ನನ್ನು, ಎತ್ತ ಬೇಕಾಗಿ, ತಗ್ಗಿಸು. ನಾನೆಂಬ ಮೆರವು ಮುಂತಾದ ಲೋಕಭೋಗಗಳನ್ನೆಲ್ಲಾ ಗುಡಿಸಿ, ನನ್ನನ್ನು ಬರಿದು ಮಾಡಿ, ನಿನ್ನ ಆತ್ಮದಾನಗಳನ್ನು ಕೊಟ್ಟು, ನಿನ್ನಿಂದಲೇ ನನ್ನನ್ನು ತುಂಬು. ನಾನು ನಿನ್ನನ್ನು ಸನ್ಮಾನಿಸಿ ಸೇವಿಸುವದಕ್ಕೆ ತಕ್ಕವನಾಗುವ ಹಾಗೆಯೂ, ನಿನ್ನನ್ನು ತಿಳಕೊಳ್ಳುವ ಅಪಾರವಾದ ಜ್ಞಾನವು ನನ್ನಲ್ಲಿ ನಿತ್ಯಜೀವದ ಆರಂಭವಾಗುವ ಹಾಗೆಯೂ, ನಿನ್ನ ವಾಕ್ಯದಿಂದ ನಿನ್ನ ಮಹಿಮೆಯನ್ನು ನನ್ನಲ್ಲಿ ಮೂಡಿಸು. ಕಳದ ರಾತ್ರಿಯಲ್ಲಿ ನನ್ನನ್ನೂ ನನ್ನವರನ್ನೂ ಸುಖವಾಗಿ ಕಾಪಾಡಿದ ನಿನ್ನ ದಯೆಯನ್ನು ನೆನಸುತ್ತೇನೆ. ಈಗ ಮೂಡಿದಂಥಾ, ನೀನು ಪರಿಶುದ್ಧ ಮಾಡಿದಂಥಾ ಆದಿತ್ಯವಾರವನ್ನು ಆಶೀರ್ವದಿಸು. ನಿನ್ನ ನಾಮವು ಪರಿಶುದ್ಧವಾಗುವ ಹಾಗೆಯೂ, ನಿನ್ನ ರಾಜ್ಯವು ಪಸರಿಸುವ ಹಾಗೆಯೂ, ಅನೇಕ ಆತ್ಮಗಳ ಭಾಗ್ಯ

---

* ೧ ಯೋಹಾನ್. ೧, ೫. † ಯೋಹಾನ್. ೮, ೧೨.

ಹೆಚ್ಚುವ ಹಾಗೆಯೂ, ನಿನ್ನ ವಾಕ್ಯವನ್ನು ಇಂದು ಹೇಳುವವರಿಗೂ ಕೇಳುವವರಿಗೂ ಓದುವವರಿಗೂ ಆಳುವಂಥಾ ಬಾಳಿಸುವಂಥಾ ನಿನ್ನ ಪರಿಶುದ್ಧಾತ್ಮವನ್ನು ಅಧಿಕಾಧಿಕವಾಗಿ ದಯಮಾಡು. ಪರಲೋಕದಲ್ಲಿರುವ ತಂದೆಯೇ, ನಿನ್ನ ಬಳಿಯ ನನ್ನ ಪಕ್ಷವಾದಿಯಾದ ನಿನ್ನ ಮಗನಾಗಿರುವ ಯೇಸು ಕ್ರಿಸ್ತನಿಗಾಗಿ ಇದನ್ನೆಲ್ಲಾ ನೆರವೇರಿಸು! ಆಮೆನ್.

---

## ಆದಿತ್ಯವಾರದ ಸಂಜೆಗೆ.

ಕರ್ತನಾದ ಯೇಸುವೇ, ಸಪ್ತಕದ ಈ ಮೊದಲನೇ ದಿನದಲ್ಲಿ ನೀನು ಸತ್ತವರೊಳಗಿಂದ ಎದ್ದಂದಿನಿಂದ, ನಿನ್ನ ಜೀವದ ಪ್ರಮಾಣ ಇಂತಿಷ್ಟೆಂದು ಹೇಳ ಯಾರಿಗೂ ಅಳವಿಲ್ಲ. ನೀನು ಎಂದೆಂದಿಗೂ ಇರುವದರಿಂದ ನಿನಗೆ ನಿರ್ಲಯವಾದ ಯಾಜಕತ್ವ ಉಂಟು. ಅದು ಕಾರಣ, ನಿನ್ನ ಮುಖಾಂತರ ದೇವರ ಬಳಿಗೆ ಬರುವವರನ್ನು ಕಡೆ ಕಡೆಗೂ ರಕ್ಷಿಸ ಬಲ್ಲೆ. ಯಾಕಂದರೆ ಅವರಿಗಾಗಿ ಬಿನ್ನಯಿಸುವದಕ್ಕೆ ಯಾವಾಗಲೂ ಬದುಕುತ್ತಿ.* ಇದಲ್ಲದೆ ದೇವರ ಪ್ರಜೆಯ ಮೇಲೆ ಸದಾಕಾಲ ರಾಜನಾಗಿದ್ದಿ; ನಿನ್ನ ರಾಜ್ಯಕ್ಕೆ ಅಂತ್ಯವಿಲ್ಲ. ಕಳಿದು ಹೋಗುವ ನನ್ನ ಜೀವದ ಒಂದು ಹಗಲು ಮುಗಿದ ಈ ಸಾಯಂಕಾಲದಲ್ಲಿ ಇದನ್ನೆಲ್ಲಾ ಎಣಿಕೆ ಮಾಡುತ್ತೇನೆ. ವಿಶ್ವಾಸವಿಲ್ಲದ ಲೋಕದ ಸಹಿತವಾಗಿ ನನ್ನನ್ನು ಮಡಿದು ಹೋಗ ಬಿಡ ಬೇಡವಕಟಾ! ಇಹಜೀವದೊಡನೆ ನನ್ನ ಭಾಗ್ಯವನ್ನು ಬಾಡಿ ಹೋಗ ಗೊಡಿಸ ಬೇಡ. ಎರಡನೇ ಮರಣವು ನನಗೆ ಕಾಟ ಮಾಡದ ಹಾಗೆ,† ನನ್ನ ಪ್ರಾಣಕ್ಕೆ ನಿತ್ಯಜೀವವನ್ನು ಕೊಟ್ಟು, ಆ ದಿನದಲ್ಲಿ ನನ್ನ ಶರೀರವನ್ನು ಸಹಾ ನಿತ್ಯಜೀವಕ್ಕೆ ಎಬ್ಬಿಸು. ಈ ಹೊತ್ತು ಕೇಳಿದಂಥಾ, ಓದಿದಂಥಾ ನಿನ್ನ ವಾಕ್ಯವನ್ನು ಸೈತಾನನಿಗೆ ಎಂದೂ ಕಸಕೊಳ್ಳ ಬಿಡದೆ, ನಾನು ಯಾವಾ

---

*ಇಬ್ರಿ. ೭, ೨೪. ೨೫. †ಪ್ರಕ. ೨, ೧೧.

ಗಲೂ ಆತ್ಮದಲ್ಲಿ ಬದುಕಿ ಆತ್ಮದಲ್ಲಿ ನಡಕೊಳ್ಳುವದಕ್ಕೆ,* ಅದರ ಶಕ್ತಿಯು ನನ್ನನ್ನು ಬಲ ಪಡಿಸುವ ಹಾಗೆ, ಅನುಗ್ರಹ ಮಾಡು. ಪರಲೋಕದಲ್ಲಿರುವ ತಂದೆಯೇ, ನಿನ್ನ ಪ್ರಿಯ ಮಗನು ನನಗಾಗಿ ಕೊಟ್ಟ, ಸದಾಕಾಲ ಸಲ್ಲುವ ಬಲಿಗಾಗಿಯೂ, ಆತನು ನನಗೋಸ್ಕರ ಮಾಡುವ ಬಿನ್ನಹಕ್ಕಾಗಿಯೂ, ನನ್ನ ಪಾಪಗಳನ್ನೆಲ್ಲಾ ಮನ್ನಿಸು. ಆದರೆ ದುಷ್ಟ ಜನರಲ್ಲಿಯೂ ದುಷ್ಟ ಆತ್ಮಗಳಲ್ಲಿಯೂ ನಾನು ಜೀವಯಾತ್ರೆ ಮಾಡ ಬೇಕಾಗಿರುವದರಿಂದಲೂ, ತಿರಿಗಿ ತಿರಿಗಿ ತಿಳಿಯದೆ ನನ್ನಷ್ಟಕ್ಕೆ ತಪ್ಪಿಸಿ ಕೊಳ್ಳಲಾಗದ ಮಹಾ ಕಂಟಕಗಳಿಗೆ ಗುರಿಯಾಗುತ್ತಾ ಇರುವದರಿಂದಲೂ, ಕರ್ತನಾದ ಯೇಸುವೇ, ನಿನ್ನ ರಾಜಾಶ್ರಯವು ನನಗೆ ಯಾವಾಗಲೂ ಒದಗಲಿ! ಈ ಆಶ್ರಯವನ್ನು ನನಗೂ ನನ್ನವರಿಗೂ ಈ ರಾತ್ರಿಯಲ್ಲಿ ಸಹ ಕೊಟ್ಟು, ಕಾಪಾಡು; ಅದೇ ಬದುಕುವಲ್ಲಿಯೂ ಸಾಯುವಲ್ಲಿಯೂ ನಮಗೆ ದೊರಕಲಿ! ಕಡೆಯಲ್ಲಿ ಎಲ್ಲಾ ಮೋಸದಿಂದ ನಮ್ಮನ್ನು ತಪ್ಪಿಸಿ, ನಿನ್ನ ಪರಲೋಕ ರಾಜ್ಯದಲ್ಲಿ ಶೇರಿಸು.† ನಿನಗೆ ಸದಾಕಾಲ ಮಾನ ಬರಲಿ! ಆಮೆನ್.

---

## ಸೋಮವಾರದ ಮುಂಜಾನೆ.

ಕರ್ತನಾದ ಯೇಸುವೇ, ಕಳದ ರಾತ್ರಿಯಲ್ಲಿ ನನಗೆ ಕೊಟ್ಟ ಕೃಪಾಶ್ರಯಕ್ಕಾಗಿಯೂ, ಹುಟ್ಟಿದಂದಿನಿಂದ ನನಗೆ ಮಾಡಿದ ಸಮಸ್ತ ಉಪಕಾರಗಳಿಗಾಗಿಯೂ, ನಿನ್ನ ದಯವನ್ನು ನೆನಸಿ, ಸ್ತೋತ್ರ ಮಾಡುತ್ತೇನೆ. ಈಗ ನನ್ನ ಯಾತ್ರೆಯಲ್ಲಿ ಹೊರಟು ಮುಂದೆ ಹೋಗ ಬೇಕಾಗಿರುವದರಿಂದ, ನಿನ್ನ ಇಚ್ಛೆ ತಿಳುಕೊಳ್ಳುವದಕ್ಕೂ, ನಿನ್ನ ಇಚ್ಛೆಯ ಪ್ರಕಾರ ತಾಳ್ಮೆಯಾಗಿ ಶ್ರಮ ಸಹಿಸುವದಕ್ಕೂ, ಬೆಳಕನ್ನೂ ಶಕ್ತಿಯನ್ನೂ ಕೊಡ ಬೇಕೆಂದೂ, ಕಡೆಯಲ್ಲಿ ನಿನ್ನ ರಕ್ತದ ಮೂಲವಾಗಿ ನನಗೆ ನಿಜಮುಕ್ತಿ ಕೊಡ ಬೇಕೆಂದೂ, ಬೇಡುತ್ತೇನೆ. ಲೋಕಭೋಗಾದಿಗಳಿಗೂ ನಿನ್ನ

---

* ಗಲ. ೫, ೨೫. † ೨ ತಿಮೊ. ೪, ೧೮.

ನ್ನು ಬಿಡುವ ಪಾಪಗಳಿಗೂ ನನ್ನನ್ನು ತಪ್ಪಿಸು. ನನ್ನ ಜೀವಯಾತ್ರೆಯು ಮೋಕ್ಷಯಾತ್ರೆಯಾಗುವ ಹಾಗೆ, ನನ್ನನ್ನು ನಡಿಸು. ಪರದಲ್ಲಿ ನಿನ್ನ ಸಿಂಹಾಸನದ ಮುಂದೆ ನಿಲ್ಲುವದಕ್ಕೂ ಪರಲೋಕದಲ್ಲಿರುವ ನಿನ್ನ ಮಂದಿರದೊಳಗೆ ನಿನಗೆ ಸೇವಿಸುವದಕ್ಕೂ* ನಿನ್ನ ಮಹಿಮೆಯನ್ನು ನೋಡುವದಕ್ಕೂ ನಾನು ಯೋಗ್ಯನಾಗುವ ಹಾಗೆ, ನಿನ್ನ ರಕ್ತದಿಂದ ನನ್ನನ್ನು ತೊಳದು, ಶುದ್ಧ ಹೃದಯವನ್ನು ನನ್ನಲ್ಲಿ ನಿರ್ಮಿಸು. ಈ ಹೊತ್ತೂ ಇನ್ನು ಮುಂದೆಯೂ ನಾನು ಮಾಡ ತಕ್ಕ ಕೆಲಸಗಳನ್ನೂ, ಜನರಲ್ಲಿ ನನಗಿರುವ ಅನುದಿನದ ನ್ಯಾಯವಾದ ಹೊಕ್ಕುಬಳಿಕೆಯನ್ನೂ—ನನ್ನ ಪ್ರಾಣಕ್ಕೆ ಮೋಸವಾಗದ ಹಾಗೆಯೂ, ನನ್ನಿಂದ ಯಾರಿಗೂ ಮೋಸವಾಗದ ಹಾಗೆಯೂ—ಆಶೀರ್ವದಿಸಿ, ಪರಿಶುದ್ಧ ಮಾಡು. ಎಚ್ಚತ್ತು ಪ್ರಾರ್ಥನೆ ಮಾಡುವದರಲ್ಲಿ ನಿನ್ನ ಆತ್ಮವು ನನ್ನನ್ನು ಸ್ಥಿರ ಪಡಿಸಿ, ನಿನ್ನ ಹೆಜ್ಜೆ ಕಟ್ಟಳೆಗಳ ಹಾದಿಯಲ್ಲಿ ನಡಿಸಲಿ! ನನ್ನ ಹೃದಯವನ್ನು ಶುದ್ಧ ಮಾಡಿ, ಅಸ್ಥಿರವಾದ ಪ್ರಪಂಚದ ವಿಷಯಗಳಿಂದ ಹೆಚ್ಚೆಚ್ಚಾಗಿ ಬಿಡಿಸು. ಲೋಕದಲ್ಲಿದ್ದರೂ ಲೋಕದವನಾಗಿರದೆ, ಭೂಲೋಕದ್ದನ್ನಲ್ಲ ಪರಲೋಕದ್ದನ್ನು ಬಯಸುವ† ಕ್ರೈಸ್ತನಿಗೆ ಯುಕ್ತವಾಗಿ ನಡದು ಕೊಳ್ಳುವದಕ್ಕೆ ನನಗೆ ಸಾಮರ್ಥ್ಯವನ್ನು ಕೊಡು. ನನ್ನವರನ್ನೂ ಕ್ರೈಸ್ತರೆಲ್ಲರನ್ನೂ ಮನುಷ್ಯರೆಲ್ಲರನ್ನೂ ಇಂದು ಸಹಾ ನಿನ್ನ ಒಲುಮೆಯಿಂದ ತೃಪ್ತಿ ಪಡಿಸು! ಆಮೆನ್.

---

## ಸೋಮವಾರದ ಸಂಜೆಗೆ.

ಪರಲೋಕದಲ್ಲಿರುವ ತಂದೆಯೇ, ಈ ಸಪ್ತಕದ ಮೊದಲನೇ ಕಷ್ಟದ ಹಗಲು ಸಂದು ಹೋಯಿತೆಂದು, ಅದರಲ್ಲಿ ನೀನು ನನಗೆ ಮಾಡಿದ ಬಹಳ ಉಪಕಾರಗಳಿಗೆ ಮನಃಪೂರ್ವಕವಾಗಿ ಕೃತಜ್ಞನಾಗಿದ್ಧೇನೆ. ಇದಲ್ಲದೆ ಮನುಷ್ಯಕಷ್ಟದಿಂದ ಹುಟ್ಟುವ ಆಯಾಸಕ್ಕೆ ದಣಿದವನಾಗಿ, ಕಷ್ಟವು ಮುಗೀತೆಂದು ಸಂತೋ

* ಪ್ರಕ. ೭, ೧೫. † ಕೊಲೊ. ೩, ೧. ೨.

ಷ ಪಡುತ್ತೇನೆ. ಈ ಲೋಕವೆಂಬ ಅರಣ್ಯದ ಪಯಣದಲ್ಲಿ ಅಡಿಗಡಿಗೆ ಸಹಾಯ ಮಾಡುವಂಥ ನಿನ್ನನ್ನು ವಿಶ್ವಾಸಿಸಿ, ವಿಶ್ವಾಸದಿಂದ ಸೇವಿಸುವವರಿಗೆ ನಿತ್ಯವಾದ ವಿಶ್ರಾಂತಿಯನ್ನು ಹವಣಿಸಿ, ವಾಗ್ದತ್ತ ಮಾಡಿದಂಥ ನಿನ್ನ ಒಲುಮೆಯನ್ನು ಹೊಗಳುತ್ತೇನೆ. ನಾನು ಸಮಾಧಾನವಾಗಿ ಮಲಗಿ, ನನ್ನ ಯಾತ್ರೆಯಲ್ಲಿ ನಾಳೆ ಸೌಖ್ಯವಾಗಿ ಹೊರಟು, ಕಡೇಲಿ ಅದನ್ನು ಭಾಗ್ಯವಾಗಿ ಮುಗಿಸುವ ಹಾಗೆ, ಈಗ ನನ್ನ ಪಾಪಗಳನ್ನೆಲ್ಲ ಮನ್ನಿಸಿ, ನನ್ನ ಮನಸ್ಸಾಕ್ಷಿಯನ್ನೂ ನನ್ನ ಪೂರ್ವಭಾವವನ್ನೂ* ನಿನ್ನ ಮಗನ ರಕ್ತದಿಂದ ನಿರ್ಮಲ ಮಾಡು. ಭೂಲೋಕದಲ್ಲಿ ನಾನು ಯಾತ್ರಸ್ಥನನ್ನಿಸಿ ಕೊಂಡು, ಪರಲೋಕದಲ್ಲಿರುವ ಸ್ವಸ್ಥಳವನ್ನು ಹುಡುಕಬೇಕೆಂದು, ನೀನು ಇಚ್ಛೈಸುತ್ತಾ ಇರಲಾಗಿ, ಈ ಜೀವದ ಪಯಣದಲ್ಲೆಲ್ಲಾ ಪರಲೋಕದ ಮೇಲೆಯೂ ನಿನ್ನ ಮೇಲೆಯೂ ಮನಸ್ಸಿಟ್ಟು, ಕಡೆಯಲ್ಲಿ ಆನಂದವಾಗಿ ಪರಲೋಕಕ್ಕೆ ಏರಿ ಹೋಗುವ ಹಾಗೆ, ನನ್ನ ಪ್ರಾಣವನ್ನು ಭೂಲೋಕದ ಎಲ್ಲಾ ವಿಷಯಗಳಿಂದ ಬಿಡಿಸಿ, ಪರಲೋಕಗುಣಗಳನ್ನು ನನ್ನಲ್ಲಿ ಹುಟ್ಟಿಸಿ, ಮಾಂಸಾಶೆ ಲೋಕಾಶೆಗಳನ್ನೆಲ್ಲಾ ಕೊಂದು, ನಿತ್ಯ ಜೀವದ ಮಂಗಳದ ರುಚಿಯನ್ನು ಆಗಾಗ್ಯೆ ನನಗೆ ತೋರಿಸು. ಈ ರಾತ್ರೆಯಲ್ಲಿ, ಮುಂದಿನ ಯಾತ್ರೆಯ ಕಾಲದಲ್ಲಿ ಸಹ, ನಿನ್ನ ಪರಿಶುದ್ಧ ದೂತರ ಕಾವಲಿಯನ್ನೂ ಒತ್ತಾಸೆಯನ್ನೂ ನನಗೆ ಕೊಡು. ನನ್ನವರೆಲ್ಲರನ್ನೂ ದಯಾಪೂರ್ತಿಯಿಂದ ಪರಾಮರಿಸು! ಆಮೆನ್.

---

## ಮಂಗಳವಾರದ ಮುಂಜಾನೆ.

ಪರಲೋಕದಲ್ಲಿಯೂ ಭೂಲೋಕದಲ್ಲಿಯೂ ಸಮಸ್ತ ಅಧಿಕಾರವನ್ನು ಪಡಕೊಂಡು, ತಂದೆಯ ಬಳಿಯಲ್ಲಿ ನನ್ನ ಪಕ್ಷವಾದಿ ಆಗಿರುವ ನನ್ನ ಕರ್ತನಾದ ಯೇಸುವೇ, ನಾನು ಈ ವರೆಗೆ

---

* ಇಬ್ರಿ. ೯, ೧೪.

ಬದುಕಿದ್ದೂ ಈ ರಾತ್ರಿಯಲ್ಲಿ ವಿಶ್ರಮಿಸಿದ್ದೂ, ಮುಂತಾದ ಬಹಳ ಉಪಕಾರಗಳನ್ನು ಅನುಭವಿಸುತ್ತಾ ಬಂದದ್ದಕ್ಕೆ ನಿನ್ನ ದಯೆ ಬಿನ್ನಹಗಳು ಕಾರಣವಾಗಿರುತ್ತವೆ. ನಿನ್ನ ಹೆಸರು ಹೊಗಳಿ, ಅಪಾತ್ರನಾದ ನನಗೆ ಈ ವರೆಗೆ ನೀನು ಮಾಡಿದ ಸಮಸ್ತ ಉಪಕಾರಗಳಿಗಾಗಿ ಕೃತಜ್ಞನಾಗಿದ್ದೇನೆ. ನಿರ್ಮಾಣದಿಂದಲೂ ರಕ್ಷಣೆಯಿಂದಲೂ ಸ್ನಾನದಿಂದಲೂ ನಿನ್ನ ಆಳಾದ ಮೇಲೆ, ನಿನ್ನ ಮಾನಕ್ಕೆ ಬದುಕಿ, ನಿನ್ನನ್ನು ಸೇವಿಸುವ ಹಂಗಿನಲ್ಲಿರುವ ಕಾರಣ, ಪರಿವಿಧವಾದ ನಿನ್ನ ದಿವ್ಯ ಬಲದ ತಿಳುವಿಕೆಯಿಂದ ನಿತ್ಯಜೀವಕ್ಕೂ ದೈವಿಕ ನಡತೆಗೂ* ಅನುಕೂಲವಾದ ಭಾವವನ್ನು ನನ್ನಲ್ಲಿ ಹುಟ್ಟಿಸಿ, ಅದಕ್ಕೆ ನನ್ನನ್ನು ನೆರೆ ತಕ್ಕವನಾಗ ಮಾಡು. ಆತ್ಮದ ಫಲವಾದ ಪ್ರೀತಿ, ಸಂತೋಷ, ಸಮಾಧಾನ, ದೀರ್ಘಶಾಂತಿ, ದಯಾಳುತನ, ಉಪಕಾರತ್ವ, ವಿಶ್ವಾಸ, ಸಾತ್ವೀಕತ್ವ, ಸಂಯಮಾದಿಗಳನ್ನು ನಮ್ಮಲ್ಲಿ ಉಂಟು ಮಾಡಿ, ಬೆಳಿಸು.† ನನ್ನ ಪ್ರಾಣವನ್ನು ಅನುಜೀವಿಸಿ ಫಲಭರಿತ ಮಾಡ ತಕ್ಕ ಜೀವದ ನೀರಾದ ನಿನ್ನ ಪರಿಶುದ್ಧಾತ್ಮದಿಂದ ನನಗೆ ಬುದ್ಧಿಯನ್ನೂ ಬಲವನ್ನೂ ಎಲ್ಲಾ ಸತ್ಕ್ರಿಯೆಗಳಿಗೆ ಘಟ್ಟಿಗತನವನ್ನೂ ಕೊಡು. ನಿನ್ನ ಕೈಯನ್ನು ನನಗೆ ನೀಡಿ, ದುರಾತ್ಮಗಳೂ ದುರ್ಜನರೂ ಆದ ವೈರಿಗಳನ್ನು ತಡಿಸಿ, ನನ್ನನ್ನು ಕಾಪಾಡು. ಸರ್ವ ಕ್ರೈಸ್ತಸಭೆಯನ್ನೂ ಸರ್ವಲೋಕವನ್ನೂ ಆಶೀರ್ವದಿಸು. ಅನೇಕಾನೇಕ ಬಡ ಜನರಿಗೆ ಸಹಾಯ ಮಾಡುವದರಿಂದ ಇಂದು ಸಹ ನಿನ್ನ ಹೆಸರನ್ನು ಮಹಿಮೆ ಪಡಿಸು! ಆಮೆನ್.

---

## ಮಂಗಳವಾರದ ಸಂಜೆಗೆ.

ಕರ್ತನನ್ನು ದಿನದಿನಕ್ಕೆ ಹರಸಿರಿ! ಆತನು ಭಾರಿ ಉಪಕಾರ ನಮಗೆ ಮಾಡುತ್ತಾನೆ; ದೇವರು ನಮ್ಮ ರಕ್ಷಣೆಯಾಗಿದ್ದಾನೆ; ದೇವರು ನಮಗೆ ರಕ್ಷಣೆಗಳ ದೇವರಾಗಿದ್ದಾನೆ; ನಮ್ಮ ಕರ್ತನಾ

---

*೨ ಪೇತ್ರ. ೧, ೩. † ಗಲ. ೫, ೨೨.

ದ ಯೆಹೋವನಿಗೆ ಮರಣದಿಂದ ಹೊರಡೋಣಗಳುಂಟು.*—ಅರಸನಾದ ನನ್ನ ದೇವರೇ, ನಿನ್ನನ್ನು ಹೊಗಳುವೆನು, ನಿನ್ನ ಹೆಸರನ್ನು ಯುಗಯುಗಗಳಿಗೂ ಹರಸುವೆನು, ದಿನಾಲು ನಿನ್ನನ್ನು ಹರಸುವೆನು. ಯುಗಯುಗಾಂತರಗಳಿಗೂ ನಿನ್ನ ಹೆಸರನ್ನು ಸ್ತುತಿಸುವೆನು. ಕರ್ತನು ದೊಡ್ಡವನು, ಬಹಳವಾಗಿ ಸ್ತುತಿಸ ತಕ್ಕವನು, ಅವನ ದೊಡ್ಡಸ್ತಿಕೆ ಅಶೋಧ್ಯವಾದದ್ದು. ಕರ್ತನು ದಯವೂ ಅಂತಃಕರಣವೂ ದೀರ್ಘಶಾಂತಿಯೂ ಮಹಾ ಕೃಪೆಯೂ ಉಳ್ಳವನಾಗಿದ್ದಾನೆ. ಕರ್ತನು ಸರ್ವಕ್ಕೂ ಒಳ್ಳೆಯವನು; ಅವನ ಅಂತಃಕರಣವು ಅವನ ಎಲ್ಲಾ ಕೆಲಸಗಳ ಮೇಲೆ ಅದೆ. ನನ್ನ ಬಾಯಿ ಕರ್ತನ ಸ್ತೋತ್ರವನ್ನು ನುಡಿಯಲಿ! ಎಲ್ಲಾ ಮಾಂಸವು ಅವನ ಪರಿಶುದ್ಧವಾದ ಹೆಸರನ್ನು ಯುಗಯುಗಾಂತರಗಳಲ್ಲಿ ಹರಸಲಿ!† ನಾನು ಮಲಿನ ತುಟಿಯವನಾಗಿದ್ದು, ಮಲಿನ ತುಟಿಯ ಜನಾಂಗದಲ್ಲಿ ವಾಸವಾಗಿದ್ದರೂ, ಪರಲೋಕನಿವಾಸಿಗಳ ಕೂಡ ನಿನಗೆ ಅಡ್ಡ ಬಿದ್ದು, ಇದ್ದವನೂ ಇರುವವನೂ ಬರುವವನೂ ಆಗಿರುವಂಥ, ಸರ್ವಶಕ್ತನಾದ ದೇವರಾಗಿರುವಂಥಾ ಕರ್ತನು ಪರಿಶುದ್ಧ ಪರಿಶುದ್ಧ ಪರಿಶುದ್ಧನೆಂದು ಉಸುರುವದಕ್ಕೆ ಧೈರ್ಯಗೊಳ್ಳುತ್ತೇನೆ.‡ ನಿನ್ನ ಪರಿಶುದ್ಧವಾದ ಉನ್ನತಸ್ಥಾನದಿಂದ ನನ್ನ ಮೇಲೆಯೂ ನನ್ನವರ ಮೇಲೆಯೂ ಎಲ್ಲಾ ನಿನ್ನ ಮಕ್ಕಳ ಮೇಲೆಯೂ, ಎಲ್ಲಾ ಮನುಷ್ಯರ ಮೇಲೆ ಕೂಡಾ, ಕಟಾಕ್ಷವನ್ನಿಡು. ನಮಗೆ ಕ್ಷಮೆಯನ್ನೂ ಆಶೀರ್ವಾದವನ್ನೂ ಸಹಾಯವನ್ನೂ ಕೊಟ್ಟು, ಈ ರಾತ್ರಿಯಲ್ಲಿಯೂ ನಮಗೆ ಬರಬಹುದಾದ ಎಲ್ಲಾ ಕೇಡಿಗೆ ತಪ್ಪಿಸು. ಸರ್ವಶಕ್ತನಾಗಿರುವ, ಒಬ್ಬನೇ ಜ್ಞಾನಿಯಾದ, ಕರ್ತನಾದ ದೇವರೇ, ನೀನು ಪರಲೋಕವನ್ನೂ ಭೂಲೋಕವನ್ನೂ ಸಮುದ್ರವನ್ನೂ ನೀರುಬುಗ್ಗೆಗಳನ್ನೂ ಉಂಟು ಮಾಡಿದವನು. ನಮ್ಮನ್ನು ಸಹಾ ನಿನ್ನ ಕೃಪೆಯ ಸ್ತೋ

---

*ಕೀರ್ತ. ೬೮, ೨೦. †ಕೀರ್ತ. ೧೪೫, ೧—೩. ೮. ೯. ೨೧.
‡ಪ್ರಕ. ೪, ೮.

ತ್ರಕ್ಕೆ ಬರುವ ವಸ್ತುವಾಗ ಮಾಡು. ಹಾಳಾಗಿ ಹೋದ ಪ್ರಾಣಿಗಳಾದ ನಮ್ಮನ್ನು ನೆಟ್ಟಗೆ ಮಾಡು. ಪಾಪದ ಹಳೇ ಕೊಳಕನ್ನು ನಮ್ಮಲ್ಲಿ ಹೆಚ್ಚು ಹೆಚ್ಚಾಗಿ ಅಳಿಸಿ, ನಮ್ಮ ಒಳ ಹೊರ ಭಾವ ಗುಣಗಳನ್ನೆಲ್ಲಾ, ನಿನಗೆ ಮೆಚ್ಚುವಂತೆ, ಹೊಸತು ಮಾಡು. ಎಂದೆಂದಿಗೂ ನೀನು ನಮ್ಮಲ್ಲಿಯೂ ನಾವು ನಿನ್ನಲ್ಲಿಯೂ ಆನಂದಪಡುವ ಹಾಗೆ, ನಮ್ಮನ್ನು ನೀತಿಯ ಮರಗಳಾಗಿಯೂ ನಿನ್ನ ಸ್ತೋತ್ರಕ್ಕೆ ಬರುವ ಗಿಡಗಳಾಗಿಯೂ ಇಡು!* ಆಮೆನ್.

---

## ಬುಧವಾರದ ಮುಂಜಾನೆ.

ಪರಿಶುದ್ಧ ಮಹೋನ್ನತನ ದೇವರೇ! ಹಗಲು ನಿನ್ನದು, ಇರುಳು ಸಹ ನಿನ್ನದು; ನೀನೇ ಬೆಳಕನ್ನೂ ಸೂರ್ಯನನ್ನೂ ಸಿದ್ಧಮಾಡಿದ್ದಿ.† ಮನುಷ್ಯನು ತಿರಿಗಿ ತನ್ನ ಕೆಲಸಕ್ಕೆ ಹೊರಡುವ ಹಾಗೆ,‡ ಸೂರ್ಯನನ್ನು ಮೂಡಿಸಿ, ಕತ್ತಲೆಯನ್ನು ಬೆಳಗಾಗ ಮಾಡುತ್ತಿ.§ ಹಾಗಾದರೆ ಹಗಲಿಗೆ ತಕ್ಕ ಹಾಗೆ ಯುಕ್ತವಾಗಿ ನಡಿಯುವದಕ್ಕೂ, ದುಂದೌತನಗಳಲ್ಲಿಯೂ ಅಮಲುಗಳಲ್ಲಿಯೂ ಅಲ್ಲ, ಜಗಳದಲ್ಲಿಯೂ ಹೊಟ್ಟೆಕಿಚ್ಚಿನಲ್ಲಿಯೂ ಅಲ್ಲ, ಮಾಂಸಾಶೆಯಿಲ್ಲದ ಭಾವದಲ್ಲಿ ಪ್ರವರ್ತಿಸುವದಕ್ಕೂ ನನ್ನನ್ನು ಘಟ್ಟಿಗ ಮಾಡು.|| ನಾನಿಂದು ಬೆಳಕಿನಲ್ಲಿ ನಡದು,¶ ವಿವೇಕದಿಂದ ವರ್ತಿಸುವ ಹಾಗೆ, ರೆಕ್ಕೆಗಳ ಕೆಳಗೆ ರಕ್ಷಣೆ ತರುವ ನೀತಿಸೂರ್ಯನಾದ** ನೀನು, ಕರ್ತನಾದ ಯೇಸುವೇ, ನನಗೆ ಮೂಡು. ಇಂದು ನನ್ನ ಯಾತ್ರೆಯನ್ನು ವಿಶ್ವಾಸ ಪ್ರೀತಿ ನಿರೀಕ್ಷೆಗಳಲ್ಲಿ ನಡಿಸುವದಕ್ಕೆ ಕಲಿಸಿ ಕೊಟ್ಟು, ಅದಕ್ಕೆ ನನ್ನನ್ನು ನಿನ್ನ ವಾಕ್ಯದಿಂದ ಬಲಪಡಿಸು. ನಿನಗೂ ಸಕಲ ಮನುಷ್ಯರಿಗೂ ಶತ್ರುವಾಗಿರುವಂ

---

* ಯೆಶಾಯ. ೬೧, ೩. † ಕೀರ್ತ. ೭೪, ೧೬. ‡ ಕೀರ್ತ. ೧೦೪, ೨೨. ೨೩. § ಆಮೋಸ್. ೫, ೮. || ರೋಮ. ೧೩, ೧೩. ೧೪. ¶ ೧ ಯೋಹಾ. ೧, ೭. ** ಮಲಕಿಯ. ೪, ೨.

ಥಾ, ಈ ಲೋಕದ ಅಂಧಕಾರದಲ್ಲಿ ಆಳುವಂಥಾ ಸೈತಾನನು ನನ್ನನ್ನು ಮುಟ್ಟದ ಹಾಗೆಯೂ, ಗೆದ್ದು ನುಂಗಿ ಬಿಡದ ಹಾಗೆಯೂ, ನನ್ನನ್ನು ಕಾಪಾಡು. ಜನರಲ್ಲಿರುವ ನನ್ನ ಹೊಕ್ಕುಬಳಿಕೆಯಲ್ಲಿ ನನ್ನ ಪ್ರಾಣಕ್ಕೆ ಮಲ ಹತ್ತದ ಹಾಗೆ ರಕ್ಷಿಸು. ಇಂದು ಒಳ್ಳೇದಾಗಲಿ, ಕೆಟ್ಟದಾಗಲಿ, ನನಗೇನು ಬಂದರೂ, ಎಲ್ಲಾ ನನ್ನ ಆತ್ಮಕ್ಷೇಮಕ್ಕೆ ಒದಗಲಿ! ಪರಿವಿಧವಾದ ನನ್ನ ಕುಂದು ಕೊರತೆಗಳನ್ನು ನೋಡಿ, ದಿನದಿನ ನನ್ನ ಕಣ್ಣಿಗೆ ಅಣಗಿಸಿ ಕೊಳ್ಳುವ ನಿನ್ನ ಕೃಪೆಯ ಮಹಿಮೆಯನ್ನು ನೋಡಿ, ದಿನದಿನ ಧೈರ್ಯಗೊಳ್ಳುತ್ತಾ ಬರುವ ಹಾಗೆ, ನನಗೆ ಸಹಾಯ ಮಾಡು. ನಾನು ನಿನ್ನ ಕಟ್ಟಳೆಗಳ ಮಾರ್ಗದಲ್ಲಿ ನಡದು ದಣಿಯದ ಹಾಗೆಯೂ, ನಿನ್ನ ಬೆನ್ನಟ್ಟುವವನಾಗಿ ಆಯಾಸ ಪಡದ ಹಾಗೆಯೂ, ಸೋತು ಹೋಗುತ್ತಿರುವಾಗ್ಯೆ ನನಗೆ ಬೇಕಾದ ಬಲವನ್ನೂ, ಕುಂದು ಹೋಗುತ್ತಿರುವಾಗ್ಯೆ ಬೇಕಾದ ಶಕ್ತಿಯನ್ನೂ, ಕೊಡು.* ನನ್ನನ್ನೂ ನನ್ನವರನ್ನೂ ಮನುಷ್ಯರೆಲ್ಲರನ್ನೂ ಮಮತೆಯಿಂದ ನೆನಸು! ಆಮೆನ್.

---

## ಬುಧವಾರದ ಸಂಜೆಗೆ.

ಸರ್ವಶಕ್ತನಾದ ಮಹಾ ದೇವರೇ! ನೀನು ಹಗಲನ್ನು ಕತ್ತಲಾದ ಇರುಳಾಗ ಮಾಡುತ್ತಿ;† ನಿನ್ನ ಬುದ್ಧಿ ಸೂರ್ಯನಿಗೆ ನೇಮಿಸಿದ ಅಸ್ತಮಾನಕಾಲವು ಗೊತ್ತಾಗಿದೆ.‡ ಅದಕ್ಕೆ ಇರುಳು ಕಣ್ಣು ಎತ್ತ ಬೇಕೆಂದು, ನನಗೆ ಅಪ್ಪಣೆ ಕೊಟ್ಟು,—ಇದನ್ನೆಲ್ಲಾ ನಿರ್ಮಿಸಿದವನ್ಯಾರು? ನಕ್ಷತ್ರಗಳ ಸೈನ್ಯವನ್ನು ಲೆಖ್ಖದ ಪ್ರಕಾರ ಹೊರ ತರುವವನ್ಯಾರು? ಅವುಗಳನ್ನೆಲ್ಲಾ ಹೆಸರಿನಿಂದ ಕರೆಯುವ ಕರ್ತನಲ್ಲವೇ? ಆತನ ದೊಡ್ಡಸ್ತಿಕೆಯೂ ಬಲವಾದ ಶಕ್ತಿಯೂ ಹಿರಿದಾಗಿರುವದರಿಂದ ಒಂದೂ ತಪ್ಪುವದಿಲ್ಲವೆಂದು § ಪ್ರವಾದಿ

---

*ಯೆಶಾಯ. ೪೦, ೨೯. ೩೧ †ಆಮೋಸ್. ೫, ೮. ‡ಕೀರ್ತ. ೧೦೪, ೧೯. §ಯೆಶಾಯ. ೪೦, ೨೬.

ಯ ಬಾಯಿಂದ ನನಗೆ ತಿಳಿಸಿ, ನಿನ್ನ ದಯವನ್ನೂ ಬಲವನ್ನೂ ಬುದ್ಧಿಯನ್ನೂ ಸಾಕಾಗಿ ನಂಬದೆ ಇರುವ ನನ್ನ ಅವಿಶ್ವಾಸವನ್ನು ಶಿಕ್ಷಿಸುತ್ತಿ. ವಿಶ್ವಾಸಕ್ಕೆ ಆಲಸ್ಯನಾದ ಹೆಡ್ಡನಾಗಿದ್ದೇನೆಂದು, ಈಗ ನಿನ್ನ ಮುಂದೆ ಅರಿಕೆ ಮಾಡುತ್ತೇನೆ. ನನ್ನ ಅವಿಶ್ವಾಸದಿಂದ ನನ್ನನ್ನು ಬಿಡಿಸಿ, ವಿಶ್ವಾಸದ ಹೆಚ್ಚಿಗೆಯಿಂದ ಸಂತೋಷವನ್ನೂ ಪ್ರೀತಿಯನ್ನೂ ತಾಳ್ಮೆಯನ್ನೂ ಶಾಂತಿಯನ್ನೂ ಬುದ್ಧಿಯನ್ನೂ ದೀನತ್ವವನ್ನೂ ನನ್ನಲ್ಲಿ ಬೆಳಿಸು. ನನ್ನನ್ನು ಅಧಿಕಾಧಿಕ ಶುದ್ಧ ಮಾಡುತ್ತಾ, ಹಳೇ ಭಾವವನ್ನು ಹಾಳು ಮಾಡುತ್ತಾ, ನಿನ್ನ ಕೃಪೆಯ ದಾನಗಳನ್ನು ನನ್ನಲ್ಲಿ ಪಸರಿಸು. ನಿನ್ನ ಪ್ರಿಯ ಮಗನ ಪುಣ್ಯ ಬಿನ್ನಹಗಳನ್ನು ನನ್ನ ಗುಣಕ್ಕೆ ಎಣಿಸಿ, ಆತನಿಗಾಗಿ ನನಗೂ ನನ್ನವರಿಗೂ ಕೃಪೆಯಾಗಿರು. ಸಭೆಯಲ್ಲಿಯೂ ರಾಜ್ಯದಲ್ಲಿಯೂ ಮನೆಗಳಲ್ಲಿಯೂ ತಮ್ಮ ತಮ್ಮ ಉದ್ಯೋಗಗಳನ್ನು ಭಕ್ತರಾಗಿ ನಡಿಸುವವರನ್ನೆಲ್ಲಾ ಆಶೀರ್ವದಿಸು. ಎಲ್ಲಾ ಕಡೆಯಲ್ಲೂ ವಾಡಿಕೆಯಾದ ದುರ್ನಡತೆಗಳಿಗೆ ಅಡ್ಡ ಕಟ್ಟು. ಸ್ನಾನದ ಕೃಪೆಯಲ್ಲಿ ನೆಲೆಗೊಂಡಿರುವ ಮಕ್ಕಳನ್ನು ಕಾಪಾಡು. ಕೃಪೆಯನ್ನು ಕಳಕೊಂಡವರಲ್ಲಿ ಮಾನಸಾಂತರ ಹುಟ್ಟಿಸು. ನೀನು ಆದು ಕೊಂಡವರನ್ನು ರಕ್ಷಿಸಿ, ಅವರೆಲ್ಲರ ಹೃದಯದಿಂದ ನಿನ್ನ ಸನ್ನಿಧಿಗೆ ಏಳುವ ಪ್ರಾರ್ಥನೆಯನ್ನು ನಿನ್ನ ಮಗನಿಗಾಗಿ ಆಲೈಸು. ಯಾವಾಗಲೂ ಎಚ್ಚರವಾಗಿರುವ ನಿನ್ನ ಆಶ್ರಯದಲ್ಲಿ ನನ್ನನ್ನೂ ನನ್ನವರನ್ನೂ ಈ ರಾತ್ರಿಯಲ್ಲೂ ಭದ್ರವಾಗಿಟ್ಟು, ನಾಳೆ ಹೊತ್ತಾರೆ ಆತ್ಮದೇಹಕ್ಷೇಮ ಉಳ್ಳವರಾಗಿ ಏಳ ಮಾಡು! ಆಮೆನ್.

---

## ಬೃಹಸ್ಪತಿವಾರದ ಮುಂಜಾನೆ.

ಪರಲೋಕದಲ್ಲಿರುವ ತಂದೆಯೇ, ನಿನ್ನ ಕರುಣೆಯಿಂದಲೂ ನಿನ್ನ ಪ್ರಿಯ ಮಗನಿಗಾಗಿಯೂ ಕಳದ ರಾತ್ರಿಯಲ್ಲಿ ಸೌಖ್ಯವಾಗಿದ್ದದ್ದು ಮುಂತಾದ ಅನೇಕ ಉಪಕಾರಗಳನ್ನು ಅಪಾತ್ರರಾದ

ನಾವು ಹುಟ್ಟಿದಂದಿನಿಂದ ಅನುಭವಿಸುತ್ತಾ ಬಂದೆವು. ಆದದರಿಂದ ಪೂರ್ಣ ಹೃದಯದಿಂದ ಕೃತಜ್ಞರಾಗಿ, ಈ ಹೊತ್ತಾರೆ ನಮ್ಮ ಪ್ರಾಣ ಶರೀರಗಳನ್ನು ನಿನಗೆ ಬಲಿಯಾಗಿ ಅರ್ಪಿಸಿ, ನಂಬಿಗೆಯೂ ಬುದ್ಧಿಯೂ ದಯವೂ ಉಳ್ಳ ತಂದೆಯಾದ ನಿನ್ನ ಕೈಗೆ ನಮ್ಮನ್ನು ಒಪ್ಪಿಸುತ್ತೇವೆ. ನಮ್ಮ ಆತ್ಮ ದೇಹಗಳಿಗೆ ಏನು ಬೇಕೆಂದು ನೀನು ಬಲ್ಲಿ. ತಬ್ಬಿಬ್ಬಾದ ಚಿಂತೆಗಳನ್ನು ಬಿಟ್ಟು ಅನುದಿನದ ರೊಟ್ಟಿ ನಿನ್ನಿಂದ ಬೇಡ ಬೇಕೆಂದೂ, ಬಿತ್ತದೆ ಕೊಯ್ಯದೆ ಇರುವ ಬಾನಿನ ಹಕ್ಕಿಗಳನ್ನು ನೀನು ಸಾಕುತ್ತಾ ಬರುವದನ್ನು* ನೋಡಿ ಕೊಳ್ಳ ಬೇಕೆಂದೂ, ನಿನ್ನ ಪ್ರಿಯ ಮಗನು ನಮಗೆ ಆಜ್ಞಾಪಿಸಿ, ಮನುಷ್ಯರಾದ ನಮ್ಮನ್ನು ನೀನು ಬಹಳ ಹೆಚ್ಚಾಗಿ ಪರಾಂಬರಿಸಿ ರಕ್ಷಿಸುವಿ ಎಂದೂ, ಮಾತು ಕೊಟ್ಟದರಿಂದ, ನಮಗೂ ನಮ್ಮವರಿಗೂ ಅನುದಿನದ ರೊಟ್ಟಿಯನ್ನೂ ಕ್ಷೇಮವನ್ನೂ ನಮ್ಮ ಕೆಲಸಗಳನ್ನು ಸಾಗಿಸುವ ಆಶೀರ್ವಾದಗಳನ್ನೂ ನಮಗೆ ಉಪಯೋಗವಾದದ್ದನ್ನೂ ದಯ ಮಾಡುವ ನಿನ್ನ ಕರುಣೆಯ ಪ್ರಕಾರ, ಬಡವರಾದ ನಾವು ಬೇಡ ತಕ್ಕ ಎಲ್ಲಾ ಸಹಾಯವನ್ನು ಕೊಡ ಬೇಕೆಂದು, ನಿನ್ನ ಚಿತ್ತದ ಮೇಲೆ ಬಿನ್ನೈಸುತ್ತೇವೆ.

ಇದಲ್ಲದೆ ಇಂದು ಸಹಾ ನಮ್ಮ ಪ್ರಾಣವೆಂಬ ಮಣ್ಣಿನ ಮುದ್ದೆಯನ್ನು ಕುಲಾಲನಂತೆ ಚಕ್ರದಲ್ಲಿ ಇಟ್ಟು, ಒಳ್ಳೇ ಒಡವೆಯಾಗುವ ಹಾಗೆ ಮಾಡು. ಎಲ್ಲಾ ಕೆಲಸಗಳಲ್ಲಿ ನಿನ್ನ ಚಿತ್ತವನ್ನು ನಮಗೆ ತಿಳಿಸಿ, ಅದನ್ನು ಮಾಡುವದಕ್ಕೆ ಶಕ್ತಿ ಕೊಟ್ಟು, ಇಂದು ನಿನ್ನ ಅಪ್ಪಣೇ ಪ್ರಕಾರ ನಮ್ಮ ಮೇಲೆ ಬೀಳುವ ಶ್ರಮವನ್ನು ತಾಳ್ಮೆಯಾಗಿ ಸಹಿಸುವದಕ್ಕೆ ನಮ್ಮನ್ನು ಬಲ ಪಡಿಸ ಬೇಕೆಂದು ಪ್ರಾರ್ಥಿಸುತ್ತೇವೆ. ನಮ್ಮ ಮನೆಯವರೆಲ್ಲರನ್ನು ನಿನ್ನ ಕಡೆಗೆ ಎಳದು, ಮಾನಸಾಂತರ ಪಡಿಸಿ, ಎಲ್ಲರನ್ನು ನಿತ್ಯವಾದ ನಿನ್ನ ರಾಜ್ಯಕ್ಕೆ ಬಾಧ್ಯಸ್ಥರಾಗ ಮಾಡು! ಆಮೆನ್.

---

*ಮತ್ತಾ. ೬, ೨೬.

## ಬೃಹಸ್ಪತಿವಾರದ ಸಂಜೆಗೆ.

ಕರ್ತನಾದ ಯೇಸುವೇ, ಒಂದು ಬೃಹಸ್ಪತಿವಾರ ರಾತ್ರಿಯಲ್ಲಿ ಇಪ್ಪೇ ಗುಡ್ಡದಲ್ಲಿ ನಡುಗುತ್ತಾ, ಕಳವಳಗೊಳ್ಳುತ್ತಾ, ರಕ್ತ ಬೆವರುತ್ತಾ, ಮರಣದ ಮಟ್ಟಿಗೂ ಚಿಂತಾಕ್ರಾಂತನಾಗಿದ್ದ ನೀನು ಸಹಿಸಿದ ಅಪಾರವಾದ ಶ್ರಮವನ್ನು ನೆನಸಿ, ಕೃತಜ್ಞರಾಗಿ ಸ್ತೋತ್ರ ಮಾಡಿ, ನಮ್ಮ ಪಾಪಗಳು ಸಹಾ ನಿನ್ನ ಶ್ರಮಕ್ಕೆ ಕಾರಣವೆಂದು, ಒಪ್ಪಿ ಕೊಳ್ಳುತ್ತೇವೆ. ನಮ್ಮ ಪಾಪಗಳಿಗೆ ಹೃದಯದ ಅಡಿಯಿಂದ ಪಶ್ಚಾತ್ತಾಪ ಪಟ್ಟು, ಅವುಗಳನ್ನು ಮನಃಪೂರ್ವಕವಾಗಿ ಅಸಂಹಿಸುವ ಗುಣವನ್ನು ನಮ್ಮಲ್ಲಿ ನೀನು ಹುಟ್ಟಿಸಿ, ಅವುಗಳನ್ನು ಕ್ಷಮಿಸಿ, ನಿನ್ನ ರಕ್ತದಿಂದ ನಮ್ಮನ್ನು ತೊಳದು, ಸಿದ್ಧ ಮಾಡು. ಅಕಟಾ, ದುಷ್ಟನಲ್ಲಿರುವ ಲೋಕವು, ಕಣ್ಣಿನ ಬಯಕೆ ಮಾಂಸದ ಬಯಕೆ ಬದುಕಿನ ಹಮ್ಮು* ಇವುಗಳ ಸಹಿತವಾಗಿ, ನಮಗೆ ಹೆಚ್ಚೆಚ್ಚು ಹೇಶಿಗೆಯಾಗಿ ತೋರುವದರಿಂದ, ನಮ್ಮ ಮನಸ್ಸೂ ನಡತೆಯೂ ಅದನ್ನು ಅಗಲಿ ಬಿಡುವ ಹಾಗೆ ಮಾಡು. ನಮ್ಮ ಮೇಲೆ ಬೀಳ ತಕ್ಕ ನೇಮಕಶಾಪವನ್ನು ನಿನ್ನ ಪರಿಶುದ್ಧ ಶ್ರಮದ ಆಶೀರ್ವಾದದಿಂದ ಪರಿಹರಿಸು. ನಿನ್ನ ಕೃಪೆಯನ್ನು ಪಡಕೊಳ್ಳದೆ ಬದುಕಿ, ಸತ್ತು, ಕಡೇಲಿ ನಿರಾಶೆಯಾಗುವ ಅವಿಶ್ವಾಸಿಗಳನ್ನು ಹಿಡಿಯುವ ಭಯಭ್ರಷ್ಟತೆಗೆ ನಮ್ಮನ್ನು ತಪ್ಪಿಸು. ನಿನ್ನ ಕೃಪೆಯು ನಮಗೆ ದೊರಕಲಿ, ನಿನ್ನ ಸಮಾಧಾನವು ನಮ್ಮ ಹೃದಯವನ್ನು ಆಳಿ ಕೊಳ್ಳಲಿ!† ನೀನು ಪ್ರತ್ಯಕ್ಷವಾಗುವ ಅಂತ್ಯದಿನದಲ್ಲಿ ನಮಗೆ ಧೈರ್ಯವಿರುವ ಹಾಗೆಯೂ, ನೀನು ಬರುವಲ್ಲಿ‡ ನಮಗೆ ಮಾನಭಂಗವಾಗದ ಹಾಗೆಯೂ, ನಮ್ಮನ್ನೂ ನಮ್ಮವರನ್ನೂ ಹವಣಿಸು. ಈ ರಾತ್ರಿಯಲ್ಲಿಯೂ ನಿನ್ನ ಕೃಪೆಯನ್ನೂ ನೀನು ಕೊಡುವ ಬಲವಾದ ಆಶ್ರಯ ಸ್ಥಿರತ್ವವನ್ನೂ ನಂಬಿ, ದೃಢವಾಗಿದ್ಧೇವೆ! ಆಮೆನ್.

---

*೧ ಯೋಹಾ. ೨, ೧೬. †ಕೊಲೊ. ೩, ೧೫. ‡೧ ಯೋಹಾ. ೨, ೨೮.

## ಶುಕ್ರವಾರದ ಮುಂಜಾನೆ.

ಮಹಾ ದೇವರೇ, ಈ ವಾರದಲ್ಲಿ ಮನುಷ್ಯನಿರ್ಮಾಣ ಉಂಟಾಯಿತೆಂದು, ಇದೇ ವಾರದಲ್ಲಿ ನಿನ್ನ ಪ್ರಿಯ ಮಗನ ಮರಣದಿಂದ ಮನುಷ್ಯವಿಮೋಚನೆ ಉಂಟಾಯಿತೆಂದು ನೆನಸಿ ಕೊಂಡು, ಮಹತ್ತಾದ ಈ ಎರಡು ಉಪಕಾರಕ್ಕೆ ಮನಃಪೂರ್ವಕವಾಗಿ ಸ್ತೋತ್ರ ಮಾಡುತ್ತೇನೆ. ನಾನು ನಿನ್ನ ನಿರ್ಮಾಣವೆಂದು ನನ್ನನ್ನು ಕರುಣಿಸಿ, ನಿನ್ನ ಪ್ರಿಯ ಮಗನು ಕ್ರೂಜೇಲಿ ಸತ್ತು ತೀರಿಸಿದ ವಿಮೋಚನೇ ಕ್ರಿಯೆಯನ್ನು ನನ್ನ ಗುಣಕ್ಕೆ ಎಣಿಸ ಬೇಕೆಂದು, ಪ್ರಾರ್ಥಿಸುತ್ತೇನೆ. ನೀನು ಅಕಾರವೂ ಕ್ಷಕಾರವೂ ಮೊದಲಿನವನೂ ಕಡೆಯವನೂ* ಸರ್ವಕ್ಕೆ ಆದಿಯೂ ಅಂತ್ಯವೂ ಆಗಿದ್ಧಿ. ನಿನ್ನ ಚಿತ್ತವು ಎಲ್ಲಾ ಮನುಷ್ಯರ ಜೀವಕ್ಕೆ ಮೂಲವಾಗಿದೆ; ನಿನ್ನ ಕೃಪೆಯಿಂದ ಶಿಕ್ಕುವ ನಿನ್ನ ಐಕ್ಯವೇ ಅವರಿಗೆ ಶಾಂತಿಯನ್ನೂ ಸಂತೋಷವನ್ನೂ ಮಂಗಳವನ್ನೂ ಹುಟ್ಟಿಸುತ್ತದೆ. ಹೀಗಿರುವದರಿಂದ ನನ್ನನ್ನೂ ನನ್ನವರನ್ನೂ, ತಮ್ಮನ್ನು ಎಳೆಯಗೊಡಿಸುವ ಎಲ್ಲಾ ಮನುಷ್ಯರನ್ನು ಕೂಡಾ, ನಿನ್ನ ಕಡೆಗೆ ಎಳಿ. ಎಳೇ ಪ್ರಾಯದಲ್ಲಿ ನಾವು ಮಾಡಿದ ಪಾಪಗಳನ್ನೂ ಅಪರಾಧಗಳನ್ನೂ ನೆನಪು ಮಾಡಿ ಕೊಳ್ಳದೆ, ನಿನ್ನ ದಯದ ನಿಮಿತ್ತ ನಿನ್ನ ಕರುಣೇ ಪ್ರಕಾರ ನಮ್ಮನ್ನು ನೆನಪು ಮಾಡಿಕೋ.† ಈ ಜೀವದಲ್ಲಿ ಆಯಾಸ ಪಡುತ್ತಾ ಇರುವ ನಮಗೆ ನಿನ್ನನ್ನು ಕಂಡು ಅನುಭವಿಸಿ ಕೊಳ್ಳುವ ಆನಂದವನ್ನು ಕೊಡು. ನಿನ್ನ ಕೃಪೆಯು ನಮಗೆ ಆಧಾರವಾಗಲಿ! ನಮ್ಮ ಮೇಲೆಯೂ ನಮ್ಮ ಕೆಲಸಗಳ ಮೇಲೆಯೂ ಶ್ರಮಗಳ ಮೇಲೆಯೂ ನಿನ್ನ ಆಶೀರ್ವಾದ ಇರಲಿ! ನಿನ್ನ ಕಡೆಗೆ ಕಣ್ಣೆತ್ತುತ್ತೇವೆ. ಪರಲೋಕದಲ್ಲಿರುವ ತಂದೆಯೇ, ಎಡೆ ಬಿಡದೆ ನಮ್ಮನ್ನು ನೋಡಿ, ನೀನಿರುವ ಪರಲೋಕದಲ್ಲಿ ಶೇರುವ ಮಟ್ಟಿಗೂ ನಮಗೆ ಬೇಕಾದ ಕೃಪೆಯ ಸ್ಥಿರತ್ವವ

* ಪ್ರಕ. ೨೨, ೧೩. † ಕೀರ್ತ. ೨೫, ೭.

ನ್ನೂ ಪ್ರೀತಿಯ ಐಶ್ವರ್ಯವನ್ನೂ ಕೊರತೆ ಇಲ್ಲದೆ ದಯ ಮಾಡು. ಈ ಬಿನ್ನಹಗಳನ್ನು ಮಾಡುತ್ತಾ, ನಮಗಿಲ್ಲದ ಯೋಗ್ಯತೇ ಮೇಲೆಯಾದರೂ, ನಿನ್ನ ಪರಿಶುದ್ಧವಾದ ದೃಷ್ಟಿಯಲ್ಲಿ ಮಲಮಯವಾಗಿ ತೋರುವ ನಮ್ಮ ಪುಣ್ಯ ಶ್ರಮೆಗಳ ಮೇಲೆಯಾದರೂ ಭರವಸವಿಡದೆ, ನಮ್ಮ ಪಾಪಗಳಿಗಾಗಿಯೂ ಸಮಸ್ತ ಲೋಕದ ಪಾಪಗಳಿಗಾಗಿಯೂ ಶಾಂತಿಬಲಿಯಾಗಿಯೂ ನಿನ್ನ ಬಳಿಯಲ್ಲಿ ನಮಗೆ ಪಕ್ಷವಾದಿಯಾಗಿಯೂ* ಇರುವ ನಿನ್ನ ಪ್ರಿಯ ಮಗನ ಮೇಲೆ ವಿಶ್ವಾಸದಿಂದ ಭರವಸವಿಡುತ್ತೇವೆ. ಆತನಿಗಾಗಿ ನಮ್ಮನ್ನು ಒಲಿದು ಸಲಹು; ಆತನಿಗಾಗಿ ಈ ದಿನ, ಮುಂತಾದ ನಮ್ಮ ಜೀವದ ದಿನಗಳನ್ನೆಲ್ಲಾ, ಚನ್ನಾಗಿ ಕಳೆಯುವದಕ್ಕೆ ನಿನ್ನ ಆತ್ಮದಿಂದ ನಮ್ಮನ್ನು ಘಟ್ಟಿಗರಾಗ ಮಾಡಿ, ಈ ಜೀವಯಾತ್ರೆಯ ಅಂತ್ಯದಲ್ಲಿ ನೀನಿರುವಲ್ಲಿ ನಮ್ಮನ್ನು ಶೇರಿಸು! ಆಮೆನ್.

---

## ಶುಕ್ರವಾರದ ಸಂಜೆಗೆ.

ಕರ್ತನಾದ ಯೇಸುವೇ, ಕೃತಜ್ಞನಾಗಿ ನಿನ್ನನ್ನು ಸ್ತುತಿಸುತ್ತೇನೆ. ಈ ವಾರದಲ್ಲಿ ನೀನು—ನನ್ನ ಪಾಪಗಳಿಗಾಗಿ ಅನ್ಯಾಯಿಗಳಾದ ನ್ಯಾಯಾಧಿಪತಿಗಳ ಮುಂದೆ ನಿನ್ನ ಮೇಲೆ ಸುಳ್ಳು ದೂರಿ, ನಿನಗೆ ಚೇಷ್ಟೆ ಮಾಡಿ, ಉಗುಳಿಟ್ಟು, ಕೈಯಿಂದ ಬಡಿದು, ಕೊರಡೆಯಿಂದ ಹೊಡದು, ಮುಳ್ಳುಮುಡಿ ಇಟ್ಟು, ಬಳಿಕ ಕಳ್ಳರಿಬ್ಬರ ಸಂಗಡ ಹತ್ಯಸ್ಥಳಕ್ಕೆ ವೈದವರ ಕೈಯಿಂದ—ಕ್ರೂಜೆಯಲ್ಲಿ ಸತ್ತಿಅಲ್ಲಾ! ಕ್ರೂಜೆಯಲ್ಲಿ ತೂಗುವಾಗ ನಿನ್ನ ಬಾಯಿಂದ ಕೇಳಿಸಿದ ಸಮಾಧಾನದ ಏಳು ಮಾತಿಗೂ, ಯುಕ್ತವಾದ ಕ್ಷಣದಲ್ಲಿ ಕ್ರೂಜೆಯಲ್ಲಿ ಸತ್ತು ಪಾಪಿಗಳನ್ನು ದೇವರಿಗೆ ಅನ್ಯೋನ್ಯ ಮಾಡುವದಕ್ಕಾಗಿ ನೀನು ತಾಳಿದ ಮರಣಕ್ಕೂ, ಕೃತಜ್ಞನಾಗಿ ಸ್ತೋತ್ರ ಮಾಡುತ್ತೇನೆ. ಬಲ ಐಶ್ವರ್ಯ ಮಾನ ಶಕ್ತಿ ಘನ ಮಹಿಮೆ

---

*೧ ಯೋಹಾ. ೨, ೧. ೨.

ಸ್ತೋತ್ರಗಳನ್ನು ಪಡಕೊಳ್ಳ ಯೋಗ್ಯನಾಗಿದ್ದಿ.* ನಿನ್ನ ಶ್ರಮ ಮರಣಗಳಿಂದಾಗುವ ಆಶೀರ್ವಾದವು ನನ್ನ ಮೇಲೆಯೂ ನನ್ನವರ ಮೇಲೆಯೂ ಬಡ ಪಾಪಿಗಳೆಲ್ಲರ ಮೇಲೆಯೂ ನಮ್ಮ ನೀತಿಗಾಗಿಯೂ ಶುದ್ಧೀಕರಣಕ್ಕಾಗಿಯೂ ಬರಲಿ! ನಿನ್ನ ಆತ್ಮವು ನಿನ್ನ ಮಹಿಮೆಯನ್ನು ನಮ್ಮ ಆತ್ಮಗಳಿಗೆ ಹೆಚ್ಚೆಚ್ಚಾಗಿ ಪ್ರಕಟ ಮಾಡಲಿ! ನಮ್ಮ ಪ್ರಾಣಗಳನ್ನು ನಿನ್ನ ರಕ್ತದಿಂದ ಶುಚಿ ಮಾಡು. ನಿನ್ನ ಘಾಯಗಳ ಮೂಲವಾಗಿ ನಮ್ಮನ್ನು ಸ್ವಸ್ಥ ಮಾಡು. ನಮ್ಮ ಯಾತ್ರೆ ಮುಗಿಯುವ ವೇಳೆಯಲ್ಲಿ ನಿನ್ನ ಶ್ರಮ ಮರಣಗಳ ಪುಣ್ಯವು ನಿನ್ನ ಭಕ್ತರಾದ ನಮಗೆ ಬಲವಾದ ಆಧಾರವಾಗಲಿ! ನಿನ್ನ ಪುಣ್ಯದ ಮೂಲವಾಗಿ ಸಮಾಧಾನವಾಗಿಯೂ ಮಂಗಳವಾಗಿಯೂ ಸತ್ತವರ ಪ್ರಾಣಗಳನ್ನು ನಿನ್ನ ಬಳಿಯಲ್ಲಿರುವ ಆನಂದದಲ್ಲಿ ಬರ ಮಾಡು. ತಂದೆಯು ನಿನಗೆ ಕೊಳ್ಳೆ ಎಂದು† ಕೊಟ್ಟವರ ದೊಡ್ಡ ಸಮೂಹದಲ್ಲಿ ನಮ್ಮನ್ನು ಸಹಾ ಸೇರಿಸು. ತಂದೆಯೇ, ನಾನು ಇರುವಲ್ಲಿ ನೀನು ನನಗೆ ಕೊಟ್ಟವರು ಸಹಾ ಇದ್ದು, ನೀನು ನನಗೆ ಕೊಟ್ಟ ಮಹಿಮೆಯನ್ನು ನೋಡ ಬೇಕೆಂದು‡ ಇಚ್ಛೈಸುತ್ತೇನೆಂಬ ನಿನ್ನ ಮಾತು ನಮ್ಮಲ್ಲಿಯೂ ಪೂರ್ತಿಯಾಗಲಿ! ಈ ರಾತ್ರಿಯಲ್ಲಿ ನಮ್ಮನ್ನು ಕಾಪಾಡಿ, ಬದುಕುವ ವರೆಗೂ ನಮ್ಮನ್ನು ಶುದ್ಧ ಮಾಡಿ, ಮುಂದಿನ ಮಹಿಮೆಗಾಗಿ ಹವಣಿಸ ಬೇಕೆಂದು, ನಮ್ಮ ಆತ್ಮ ಶರೀರಗಳನ್ನು ನಿನಗೆ ಒಪ್ಪಿಸುತ್ತೇನೆ! ಆಮೆನ್.

---

## ಶನಿವಾರದ ಮುಂಜಾನೆ.

ಕರ್ತನಾದ ಯೇಸುವೇ, ಹೊರೆ ಹೊತ್ತು ದಣಿದವನಾಗಿ, ಈ ಹೊತ್ತಾರೆ ಬಂದು, ಇಂದೂ ಸದಾಕಾಲವೂ ದಯಾಳುವಾಗಿ ಆಳುವ ನಿನ್ನ ಮೆತ್ತನೆಯಾದ ನೊಗವನ್ನು ಹೊರುತ್ತಾ, ನಿನಗೆ ಪೂರ್ಣ ವಿಧೇಯನಾದ ಆಳಾಗಿ ನಡಕೊಂಡು, ಆತ್ಮಶಾಂ

---

* ಪ್ರಕ. ೫, ೧೨. † ಯೆಶಾ. ೫೩, ೧೨. ‡ ಯೋಹಾ. ೧೭, ೨೪.

ತಿಯನ್ನು ಹೊಂದಿ ಅನುಭವಿಸ ಬೇಕೆಂದು, ಅಪೇಕ್ಷಿಸುತ್ತೇನೆ.* ಆದದರಿಂದ ನಿನ್ನ ಆತ್ಮದ ಮುಖಾಂತರ ನನಗೆ ಸಹಾಯ ಮಾಡಿ, ಪ್ರಪಂಚದ ವ್ಯರ್ಥವಾದ ತಾಪತ್ರಯಗಳು ನನ್ನನ್ನು ಇತ್ತ ಅತ್ತಲು ಎಳದು ಕೆಡಿಸಿ ನುಂಗಿ ಬಿಡದ ಹಾಗೆ, ನಿನ್ನ ಐಕ್ಯದಲ್ಲಿ ನನ್ನನ್ನು ಶೇರಿಸು. ಈ ವರೆಗೂ ನನಗೂ ನನ್ನವರಿಗೂ ಸಹಾಯ ಮಾಡುತ್ತಾ ಬಂದಿ. ಇನ್ನು ಮುಂದೆಯೂ ನಮಗೆ ಸಹಾಯ ಮಾಡು. ಯಾವ ಕಾಟವಾದರೂ ನಮ್ಮನ್ನು ಮುಟ್ಟ ಕೂಡದ ನಿತ್ಯ ಮಂಗಳವಾದ ದೇವರ ಶಾಂತಿಯಲ್ಲಿ ಶೇರುವ ಪರ್ಯಂತರ ನಮಗೆ ಸಹಾಯ ಮಾಡು. ಆ ವರೆಗೆ ನೀನು ನಮ್ಮನ್ನು ಕಾಪಾಡಿ, ಲೋಕದ ಹಗೆಗೆ ನಮ್ಮಲ್ಲಿ ಹಗೆ ಹುಟ್ಟದ ಹಾಗೆಯೂ, ಲೋಕದ ಭೋಗಾಚಾರದ ಭ್ರಮೆಯು ನಮಗೆ ಹತ್ತದ ಹಾಗೆಯೂ, ನಮ್ಮನ್ನು ಎಚ್ಚರಿಸುತ್ತಾ ಇರು. ಅವಿಶ್ವಾಸವು ನಮ್ಮ ಹೃದಯಗಳನ್ನು ಮೋಸಗೊಳ್ಳಿಸದ ಹಾಗೆ ಅಡ್ಡ ಕಟ್ಟು. ಪ್ರಪಂಚದ ಮರುಳಿಗೆ ನಮ್ಮನ್ನು ತಪ್ಪಿಸಿ, ವಿಶ್ವಾಸ ಪ್ರೀತಿ ನಿರೀಕ್ಷೆಗಳ ನೆಟ್ಟಗೆಯಾದ ಹಾದಿಯಲ್ಲಿ ನಡಿಸಿ, ಮುಕ್ತಿ ಎಂಬ ಗಡಿಗೆ ತಲ್ಪಿಸು. ಪರಲೋಕದಲ್ಲಿರುವ ತಂದೆಯೇ, ಯುಗಯುಗಾಂತರಗಳಿಗೆ ಮಾನ ಹೊಂದ ತಕ್ಕ ಯೇಸು ಕ್ರಿಸ್ತನ ಮುಖಾಂತರ ನಿನ್ನ ಸಮುಖದಲ್ಲಿ ಸಮರ್ಪಕವಾದದ್ದನ್ನು ನಮ್ಮಲ್ಲಿ† ಉಂಟು ಮಾಡು! ಆಮೆನ್.

---

## ಶನಿವಾರದ ಸಂಜೆಗೆ.

ಕರ್ತನಾದ ಯೇಸುವೇ, ನೀನು ನಿಜವಾಗಿ ಸತ್ತು, ನಿಜವಾಗಿ ಸಮಸ್ತ ಲೋಕದ ಪಾಪಗಳಿಗಾಗಿ ಶಾಂತಿಬಲಿಯಾದಿ! ಈಗ ಕಳದು ಹೋಗುವ ದಿನದ ಹಗಲಲ್ಲಿಯೂ ಈಗ ತೊಡಗುವ ರಾತ್ರಿಯಲ್ಲಿಯೂ ನೀನು ಸಮಾಧಿಯಲ್ಲಿ ಮಲಗಿದ್ದರಿಂದ, ಅದ

---

* ಮತ್ತಾ. ೧೧, ೨೮. † ಇಬ್ರಿ. ೧೩, ೨೧.

ಕ್ಕೆ ದೃಷ್ಟಾಂತವನ್ನು ಕೊಟ್ಟ ನನ್ನ ರಕ್ಷಕನೇ, ಸಪ್ತಕದ ಕಡೇ ದಿವಸದಲ್ಲಿ ನಾನು ಪಾಪಿ, ಹೌದು, ಮಹಾ ಪಾಪಿ ಎಂದು ಅನುಭವದಿಂದ ತಿಳುಕೊಳ್ಳುವದರಿಂದ, ನಿನ್ನ ಕೃಪೆಯು ನನಗೆಷ್ಟೋ ಅವಶ್ಯ! ಬಹಳ ದುಷ್ಕ್ರಿಯೆಗಳನ್ನು ಮಾಡಿದೆನು; ಬಹಳ ಸತ್ಕ್ರಿಯೆಗಳನ್ನು ಮಾಡದೆ ಹೋದೆನು. ನನ್ನ ಎಲ್ಲಾ ಕ್ರಿಯೆಗಳಲ್ಲಿ ತಪ್ಪಿಲ್ಲದ್ದು ಒಂದೂ ಇಲ್ಲಾ. ನಿನ್ನ ಸೇವಕನ ಸಂಗಡ ನ್ಯಾಯವಿಚಾರಣೆಗೆ ಬರ ಬೇಡ; ಯಾಕಂದರೆ ಬದುಕುವವರಲ್ಲಿ ಒಬ್ಬನಾದರೂ ನಿನ್ನ ಮುಂದೆ ನೀತಿವಂತನಾಗುವದಿಲ್ಲ.* ನೀನು ಅರ್ಪಿಸಿದ ಶಾಂತಿಬಲಿಯೂ ನೀನು ಮಾಡುವ ಬಿನ್ನಹವೂ ನನ್ನ ಗುಣಕ್ಕೆ ಬರಲಿ! ಪಾಪಪರಿಹಾರದ ಸಮಾಧಾನವಿಲ್ಲದೆ, ನನ್ನನ್ನು ಮಲಗ ಬಿಡ ಬೇಡ. ನನ್ನ ಅಕ್ರಮದಿಂದ ನನ್ನನ್ನು ಪೂರ್ಣವಾಗಿ ತೊಳಿ; ನನ್ನ ಪಾಪದಿಂದ ನನ್ನನ್ನು ಶುಚಿ ಮಾಡು.† ನನ್ನ ಆಯುಷ್ಯವು ಎಷ್ಟೋ ಬೇಗ ಕಳಿಯುತ್ತದೆ! ಎಷ್ಟೋ ತ್ವರೆಯಾಗಿ ಒಬ್ಬೊಬ್ಬ ಮನುಷ್ಯನಿಗೆ ಸಾಯುವ ದಿವಸವೂ, ಲೋಕಕ್ಕೆಲ್ಲಾ ಕಡೇ ದಿವಸವೂ, ಬರುತ್ತದೆ! ಆದರೆ ನೀನು, ಕರ್ತನೇ, ಇದ್ದ ಹಾಗೆ ಇರುತ್ತೀ. ನಿನ್ನ ವರುಷಗಳು ಮುಗಿಯವು.‡ ಸಾಯುವ ದಿವಸವೂ ನ್ಯಾಯತೀರ್ವಿಕೆಯ ದಿವಸವೂ ಬರಲು, ನಾನು ನೆರೆಸಿದ್ಧನಾಗಿರುವ ಹಾಗೆ, ಕೃಪೆಯ ಕಾಲವನ್ನು ಪ್ರಯೋಜನಕ್ಕೆ ತರುವದಕ್ಕೂ ಜಾಗರನಾಗಿ ಪ್ರಾರ್ಥಿಸುವದಕ್ಕೂ ಮನಮುಟ್ಟಿ ಸತ್ಯದಿಂದ ಸೇವೆ ಮಾಡುವದಕ್ಕೂ ನನ್ನನ್ನು ಎಚ್ಚರಿಸು. ಅಶುದ್ಧನಾದ ಯಾವನಾದರೂ ನಿನ್ನನ್ನು ಸಂತೋಷದಿಂದ ಕಾಣಲಾರದೆ ಇರುವದರಿಂದ ನನ್ನನ್ನು ಶುದ್ಧ ಮಾಡು.§ ನಿನ್ನ ಕರುಣೆಯನ್ನು ನನ್ನ ಮೇಲೆಯೂ ನನ್ನವರ ಮೇಲೆಯೂ ಮನುಷ್ಯರೆಲ್ಲರ ಮೇಲೆಯೂ ಸಹ ಪಸರಿಸು. ಸೈತಾನನ ಕ್ರಿಯೆಗಳನ್ನು ಎಲ್ಲಾ ಕಡೆಯಲ್ಲಿಯೂ ಹಾಳು ಮಾಡಿ, ನಿನ್ನ ರಾಜ್ಯವನ್ನು

---

* ಕೀರ್ತ. ೧೪೩, ೨. † ಕೀರ್ತ. ೫೧, ೨. ‡ ಕೀರ್ತ. ೧೦೨, ೨೭. § ಇಬ್ರಿ ೧೨, ೧೪.

ಬರ ಮಾಡಿ, ನೀನು ರಕ್ಷಿಸಿದ ಮನುಷ್ಯರ ರಕ್ಷಣೆಯನ್ನು ಸಾಗಿಸು. ನಿನ್ನನ್ನು ಹೊಗಳುತ್ತೇನೆ; ನಿನಗೆ ಕೃತಜ್ಞನಾಗಿ ಸ್ತೋತ್ರ ಮಾಡುತ್ತೇನೆ; ನಿನಗೆ ಅಡ್ಡ ಬೀಳುತ್ತೇನೆ; ನಿನಗೆ ನನ್ನನ್ನು ಬಲಿಯಾಗಿ ಕೊಡುತ್ತೇನೆ. ನಿನಗಾಗಿ ಬದುಕಿ, ನಿನಗಾಗಿ ಶ್ರಮೆ ಪಟ್ಟು, ನಿನಗಾಗಿ ಸಾಯುತ್ತೇನೆ. ಬದುಕುವಾಗಲೂ ಸಾಯುವಾಗಲೂ ನಿನ್ನವನಾಗಿದ್ದೇನೆ. ನಿನ್ನ ಮಾನಕ್ಕಾಗಿ ನನಗೆ ಮುಕ್ತಿ ಕೊಡು, ಕರ್ತನಾದ ಯೇಸುವೇ! ಆಮೆನ್.

# ದೇವರ ಆಶೀರ್ವಾದವು

## ಮನೆಮಾರುಗಳ ಮೇಲೆ ಬರ ಬೇಕೆಂಬುವದಕ್ಕೆ ಮಾಡುವ ಪ್ರಾರ್ಥನೆ.

ಮಹಾ ದೇವರೇ, ಮನುಷ್ಯರು ಗಂಡಹೆಂಡರಾಗಿ ಬದುಕುವ ಕಟ್ಟಳೆಯನ್ನು ಕೊಟ್ಟು, ಮದುವೆಯ ಪದ್ಧತಿಯನ್ನು ಆಶೀರ್ವದಿಸಿ, ಪರಿಶುದ್ಧ ಮಾಡಿದ್ದಿ. ನಿನ್ನ ಪ್ರಿಯ ಮಗನು, ಕಾನ ಊರಲ್ಲಿ ಆದ ಮದುವೆಗೆ ಬಂದದ್ದು ಮುಂತಾದ ಬೇರೆ ಬೇರೆ ಕ್ರಿಯೆಗಳಿಂದಲೂ ವಾಕ್ಯಗಳಿಂದಲೂ, ಮದುವೆಯ ನೇಮಕ್ಕೆ ಬಲವನ್ನೂ ಮಾನವನ್ನೂ ಕೊಟ್ಟನು. ಈ ಸ್ಥಿತಿಯಲ್ಲಿ ಶೇರಿದ ನನಗೂ ನನ್ನವರಿಗೂ ಕರುಣೆಯನ್ನು ತೋರಿಸು. ನಿನ್ನ ಆಶೀರ್ವಾದವು ಅಡ್ಡಿ ಇಲ್ಲದೆ ನಮ್ಮ ಮೇಲೆ ನೆಲೆಗೊಳ್ಳುವ ಹಾಗೆ, ದಿನದಿನಕ್ಕೆ ನಮ್ಮ ಪಾಪಗಳನ್ನು ಮನ್ನಿಸು. ನಮ್ಮ ಮನೆಯಲ್ಲಿ ನಿನ್ನ ಮಾನವಿರುವ ಹಾಗೆಯೂ, ನಿನ್ನ ಕೃಪೆಯ ರಾಜ್ಯದ ನ್ಯಾಯವು ನಡೆಯುವ ಹಾಗೆಯೂ, ಮನೆಯವರು ಯಾವಾಗಲೂ ಕ್ರೈಸ್ತರಿಗೆ ತಕ್ಕ ಕ್ರಮದಿಂದ ಪ್ರೀತಿಯನ್ನು ಕೈಕೊಳ್ಳುವ ಹಾಗೆಯೂ, ನಮ್ಮೆಲ್ಲರನ್ನು ನಿನ್ನ ಪರಿಶುದ್ಧಾತ್ಮದಿಂದ ಆಳಿ ಕೊಂಡು, ಸೈತಾನನೆದುರಿಗೆ ನಿಲ್ಲುವಂಥಾ, ಪ್ರಪಂಚವನ್ನು ಜೈಸುವಂಥಾ, ನಿನ್ನ ವಾಕ್ಯದ ನೇ

ಮಕ್ಕೆ ಅನುಕೂಲವಾಗಿ ನಡೆಯುವಂಥಾ, ಜಯಪ್ರದವಾದ ದೃಢ ವಿಶ್ವಾಸವನ್ನು ನಮಗೆ ಕೊಡು. ಅಶನ ವಸನಾದಿಗಳನ್ನು ದಿನದಿನಕ್ಕೆ ದಯ ಮಾಡಿ, ಎಲ್ಲಾ ಕೇಡಿನ ಬೇರಾದ ಲೋಭಕ್ಕೂ ನಂಬಿಕೆ ಇಲ್ಲದ ಚಿಂತೆಗಳಿಗೂ ನಮ್ಮನ್ನು ತಪ್ಪಿಸು. ಕರ್ತನು ಮನುಷ್ಯನ ಮಾರ್ಗಗಳಿಗೆ ಮೆಚ್ಚಿದರೆ, ಇವನ ಶತ್ರುಗಳನ್ನು ಸಹ ಇವನ ಸಂಗಡ ಸಮಾಧಾನವಾಗ ಮಾಡುತ್ತಾನೆಂಬ* ವಾಗ್ದತ್ತವನ್ನು ನಮ್ಮಲ್ಲಿ ಪೂರೈಸು. ಯಾರಿಗೂ ನಮ್ಮ ನಡತೆಯಿಂದ ಮೋಸವೂ ಅನ್ಯಾಯವೂ ಆಗದ ಹಾಗೆ, ನಮಗೆ ಬುದ್ಧಿ ಕೊಡು. ನಮ್ಮ ಉಪದ್ರಗಳನ್ನು ಆಶೀರ್ವದಿಸಿ, ಅವುಗಳನ್ನು ಸಹಿಸುವದಕ್ಕೆ ಸಾಕಾದ ತಾಳ್ಮೆಯನ್ನು ನಮಗೆ ಕೊಟ್ಟು, ಪರಿಶುದ್ಧರೆಲ್ಲರ ಸಂಗಡ ನಾವು ನಿನ್ನನ್ನು ಪ್ರೀತಿ ಮಾಡಿ ಹೊಗಳುವ, ಅನೇಕ ವಾಸಸ್ಥಾನಗಳುಳ್ಳ, ನಿನ್ನ ಪರಲೋಕದ ಆಲಯದಲ್ಲಿ ಕಡೆಗೆ ನಮ್ಮನ್ನು ಶೇರಿಸಿಕೋ! ಆಮೆನ್.

# ಸಾಯಲಾಗಿರುವವರ
## ಕಿವಿಯಲ್ಲಿ ಹೇಳ ತಕ್ಕ ಮಾತುಗಳು.

ತ್ರಿಯೇಕನಾದ ದೇವರೇ! ತಂದೆಯೂ ಮಗನೂ ಪರಿಶುದ್ಧಾತ್ಮವೂ ಆದ ದೇವರೇ! ನಿನ್ನನ್ನು ನಂಬಿ ಸ್ನಾನ ಹೊಂದಿದ ಪಾಪಿಗಳಾದ ನಮಗೆ ಕೃಪೆಯಾಗಿರು. ಪರಲೋಕದ ತಂದೆಯಾಗಿರುವ ಕರ್ತನಾದ ದೇವರೇ, ನಮ್ಮನ್ನು ಕರುಣಿಸು. ಮಗನಾಗಿರುವ ದೇವರಾದ ಕರ್ತನೇ, ಲೋಕದ ರಕ್ಷಕನೇ, ನಮ್ಮನ್ನು ಕರುಣಿಸು. ಪರಿಶುದ್ಧಾತ್ಮವಾಗಿರುವ ಕರ್ತನಾದ ದೇವರೇ, ನಮ್ಮನ್ನು ಕರುಣಿಸು. ನಮಗೆ ಕೃಪೆಯಾಗಿದ್ದು, ನಮ್ಮನ್ನು ಉಳಿಸು, ಪ್ರಿಯ ಕರ್ತನಾದ ದೇವರೇ! ನಮಗೆ ಕೃಪೆಯಾಗಿದ್ದು, ಸಲಹು,

*ಸಾಮತಿ. ೧೬, ೭.

ಪ್ರಿಯ ಕರ್ತನಾದ ದೇವರೇ! ನಿನ್ನ ಪರಿಶುದ್ಧ ಜನನದ ಮುಖಾಂತರವಾಗಿಯೂ, ನಿನ್ನ ಪ್ರಾಣಸಂಕಟ ರಕ್ತಸ್ವೇದಗಳ ಮುಖಾಂತ್ರವಾಗಿಯೂ, ನಿನ್ನ ಕ್ರೂಜೇ ಮರಣದ ಮುಖಾಂತರವಾಗಿಯೂ, ನಿನ್ನ ಪರಿಶುದ್ಧ ಪುನರುತ್ಥಾನ ಪರಲೋಕಾರೋಹಣಗಳ ಮುಖಾಂತರವಾಗಿಯೂ, ನಮ್ಮ ಕಡೇ ಕಷ್ಟಗಳಲ್ಲಿಯೂ ನ್ಯಾಯತೀರ್ವಿಕೆಯ ದಿನದಲ್ಲಿಯೂ ನಮ್ಮನ್ನು ಸಲಹು, ಪ್ರಿಯ ಕರ್ತನಾದ ದೇವರೇ! ಲೋಕದ ಪಾಪವನ್ನು ಹೊತ್ತು ಕೊಂಡು ಹೋದ ಓ ದೇವರ ಕುರಿಮರಿಯೇ, ನಮ್ಮನ್ನು ಕರುಣಿಸು.

ನನ್ನ ದೇವರಾದ ಕರ್ತನೇ, ನನ್ನನ್ನು ಕೈ ಬಿಡ ಬೇಡ. ನನಗೆ ದೂರವಾಗಿರ ಬೇಡ. ಬೇಗ ನನ್ನ ಸಹಾಯಕ್ಕೆ ಬಾ, ನನ್ನ ಬೆನ್ನಾಸರೆಯಾದ ದೇವರೇ!

ನನ್ನ ಕಕುಲತೆಯನ್ನೂ ಪೀಡೆಯನ್ನೂ ನೋಡಿ, ನನ್ನ ಪಾಪಗಳನ್ನೆಲ್ಲಾ ಮನ್ನಿಸು. ಸಹಿಸ ಕೂಡದ ಶೋಧನೆಯಲ್ಲಿ ನನ್ನನ್ನು ಬೀಳ ಗೊಡಿಸ ಬೇಡ. ನನ್ನ ಶ್ರಮವನ್ನು ಶಾಂತವಾಗಿ ತಾಳುವದಕ್ಕೆ ನನ್ನನ್ನು ಬಲ ಪಡಿಸಿ, ಅದಕ್ಕೆ ಮಂಗಳವಾದ ಅಂತ್ಯವನ್ನೂ ಫಲವನ್ನೂ ಕೊಡು.

ಪರಲೋಕದಲ್ಲಿರುವ ತಂದೆಯೇ, ನಿನ್ನ ಮಗನು ನನಗಾಗಿ ಶ್ರಮ ಪಟ್ಟು ಸತ್ತನೆಂಬುವದನ್ನು ನೆನಸಿ, ಅದಕ್ಕಾಗಿ ನನಗೆ ಕೃಪೆ ಮಾಡಿ, ನನ್ನ ಪಾಪಗಳನ್ನು ಜ್ಞಾಪಕ ಮಾಡಿ ಕೊಳ್ಳದೆ, ನನ್ನ ಪ್ರಾಣವನ್ನು ನಿತ್ಯ ಶಾಂತಿಯಲ್ಲಿ ಶೇರಿಸಿ, ನನ್ನ ಶರೀರವನ್ನು ನಿತ್ಯಜೀವಕ್ಕೆ ಎಬ್ಬಿಸ ಬೇಕೆಂದು, ಬೇಡುತ್ತೇನೆ.

ತಂದೆಯಾದ ದೇವರೇ, ನಾನು ಮಹಾ ಪಾಪಿಯಕಟಾ! ನಾನು ಪರಲೋಕದ ಮಂಗಳಕ್ಕಲ್ಲ, ನರಕದ ಪೀಡೆಗಳಿಗೆ ಪಾತ್ರನು. ಆದಾಗ್ಯೂ ಕ್ರೂಜೆಯ ಮರಣದ ಪರ್ಯಂತರ ನಿನಗೆ ವಿಧೇಯನಾಗಿದ್ದ ನಿನ್ನ ಮಗನ ನೀತಿಯು ನನ್ನದಾಗಲಿ! ಇದರ ಮೂಲವಾಗಿ ನಿನ್ನ ನ್ಯಾಯತೀರ್ವಿಕೆಗೆ ತಪ್ಪಿಸಿ ಕೊಂಡು, ನಿನ್ನ ಪರಲೋಕರಾಜ್ಯದಲ್ಲಿ ಶೇರ ಕೋರುತ್ತೇನೆ.

ಕರ್ತನಾದ ಯೇಸುವೇ, ನನ್ನ ಆತ್ಮವನ್ನು ನಿನ್ನ ಕೈಗೆ ಒಪ್ಪಿಸುತ್ತೇನೆ. ಕರ್ತನಾದ ಯೇಸುವೇ, ನನ್ನ ಆತ್ಮವನ್ನು ಸೇರಿಸಿಕೋ. ಕರ್ತನಾದ ಯೇಸುವೇ, ನೀನಿರುವಲ್ಲಿ ಬಂದು, ತಂದೆ ನಿನಗೆ ಕೊಟ್ಟ ಮಹಿಮೆಯನ್ನು ನಾನು ನೋಡುವ ಹಾಗೆ, ಅಪ್ಪಣೆ ಕೊಡು.

ಕರ್ತನಾದ ಯೇಸುವೇ, ಶರೀರವೆಂಬ ಈ ಗೂಡು ಮೆತ್ತನ ಕೈಯಿಂದ ಮೆಲ್ಲನೆ ಬಿಚ್ಚಿ, ಆ ಬಳಿಕ ನನ್ನ ಪ್ರಾಣವನ್ನು ನಿನ್ನ ದೂತರ ಸೇವೆಯಿಂದ ಶಾಂತಿಯ ಸ್ಥಾನಕ್ಕೆ ತರಿಸು. ಅಷ್ಟು ವರೆಗೆ ಅದನ್ನು ನಿನ್ನ ರಕ್ತದಿಂದ ಇನ್ನು ಹೆಚ್ಚಾಗಿ ತೊಳದು, ನನ್ನ ಪೀಡೆ ಎಂಬ ಕೊಲುಮೆಯಲ್ಲಿ ನೆರೆಪುಟ ಹಾಕಿ, ಚೊಕ್ಕಟ ಮಾಡು.

ಕರ್ತನಾದ ಯೇಸುವೇ, ಮಾಂಸದ ದಿವಸಗಳಲ್ಲಿ ಘಟ್ಟಿಯಾದ ಕೂಗಿನಿಂದಲೂ ಕಣ್ಣೀರಿನಿಂದಲೂ ಪ್ರಾರ್ಥನೆಗಳನ್ನೂ ವಿಜ್ಞಾಪನೆಗಳನ್ನೂ ಅರ್ಪಿಸಿದವನೇ, ಮರಣಕ್ಕೆ ಅಳುಕುವ ಅಂಜಿಕೆ ಎಲ್ಲಾ ನನ್ನ ಹೃದಯದಿಂದ ಹೊರಡಿಸಿ, ಸೀಮೆಯೋನನಂತೆ ಸಮಾಧಾನವಾಗಿ ತೊಲಗಿ ಹೋಗಲಿಕ್ಕೆ ನನ್ನನ್ನು ಸಿದ್ಧಿಸು.

ಕರ್ತನಾದ ಯೇಸುವೇ, ನನ್ನ ಪ್ರಾಣ ಶರೀರಗಳನ್ನೂ ಲೋಕದಲ್ಲಿ ನಾನು ಬಿಟ್ಟು ಹೋಗುವ ಮನೆಯವರೆಲ್ಲರನ್ನೂ ನಿನಗೆ ಒಪ್ಪಿಸುತ್ತೇನೆ. ನನ್ನನ್ನೂ ಅವರೆಲ್ಲರನ್ನೂ ಮಮತೆಯಿಂದ ನೆನಪು ಮಾಡಿಕೋ. ಅವರನ್ನು ಪರಾಮರಿಸು. ಅವರನ್ನು ನಿನ್ನ ಕಡೆಗೆ ಎಳಕೋ. ಅವರಲ್ಲಿ ಒಬ್ಬನನ್ನಾದರೂ ನಾಶವಾಗ ಗೊಡಿಸಬೇಡ. ನಾನು ಬಿಟ್ಟು ಹೋಗುವವರು ಸದ್ಭಕ್ತಿಯಲ್ಲಿ ಐಕ್ಯವಾಗಿದ್ದು, ಒಬ್ಬರಿಗೊಬ್ಬರು ನಿಜವಾದ ಪ್ರೀತಿಯಿಂದಲೂ ನಂಬಿಗೆಯಿಂದಲೂ ಬೆನ್ನಾಸರೆ ಕೊಡುವ ಹಾಗೆ, ದಯ ಮಾಡು.

ಓ ದೇವರೇ, ಈ ವರೆಗೆ ನಾನು ನಡಿಸಿದ ನಡತೆಗಾಗಿ ನಿನ್ನ ಮುಂದೆ ನಾಚಿಕೆ ಪಡುತ್ತೇನೆ. ಅನೇಕ ದುಷ್ಕ್ರಿಯೆಗಳನ್ನು ಮಾಡಿ, ಅನೇಕ ಸತ್ಕ್ರಿಯೆಗಳನ್ನು ಮಾಡದೆ, ಹೋದೆನು. ನಿನ್ನ ಪ್ರಿಯ ಮಗನಾದ ಯೇಸು ಕ್ರಿಸ್ತನಿಗಾಗಿ ನನಗೆ ಕೃಪೆಯಾಗಿರು, ನನ್ನ ದೇವರೇ! ಆತನು ನನಗೆ ಓಲಾಗಿ ದೇವರಿಂದಲೂ ಮನುಷ್ಯರಿಂ

ದಲೂ ಅತಿ ಕಠಿಣವಾದ ನ್ಯಾಯವಿಚಾರಣೆಗೆ ಗುರಿಯಾದದರಿಂದ, ನನ್ನನ್ನು ನ್ಯಾಯವಿಚಾರಣೆಗೆ ತಾರದೆ, ನನ್ನ ಅಪರಾಧವನ್ನೂ ಶಿಕ್ಷೆಯನ್ನೂ ಕೃಪೆಯಿಂದ ಬಿಟ್ಟು, ನಿನ್ನ ಪರಲೋಕರಾಜ್ಯದ ಬಾಧ್ಯತೆಯನ್ನು ನನಗೆ ದಯ ಮಾಡು.

ದೇವರೇ, ನನಗೆ ಕಡುನೋವು ಬಂದದಕಟಾ! ನನ್ನನ್ನು ಬಲಪಡಿಸು. ನನಗೆ ಬೆನ್ನಾಸರೆಯಾಗು. ಕರ್ತನೇ, ನನ್ನ ಸಂಕಟ ದೊಡ್ಡದು; ಅದನ್ನು ಹಗುರ ಮಾಡು. ನನ್ನ ಹೃದಯವು ಕಡು ಕಳವಳ ಗೊಂಡದೆ. ನನ್ನ ವ್ಯಥೆಗಳಿಂದ ನನ್ನನ್ನು ರಕ್ಷಿಸು. ನನ್ನ ಕಕುಲತೆ ಪೀಡೆಗಳನ್ನು ನೋಡಿ, ನನ್ನ ಪಾಪಗಳನ್ನೆಲ್ಲಾ ಮನ್ನಿಸು.

ಮಹಾ ದೇವರೇ, ಇಹದ ಎಲ್ಲಾ ಒಡವೆ ಭೋಗಗಳಲ್ಲಿ ಈಗ ನನ್ನ ದೇಹಕ್ಕೆ ಅನುಭವವೂ ರುಚಿಯೂ ಎಷ್ಟು ಮಾತ್ರವೂ ಇಲ್ಲದೆ ಇರಲಾಗಿ, ಜೀವದ ರೊಟ್ಟಿಯಾದ ನಿನ್ನ ಪ್ರಿಯ ಮಗನ ಮುಖಾಂತರವಾಗಿಯೂ, ಜೀವದ ನೀರಾದ ನಿನ್ನ ಆತ್ಮದ ಮುಖಾಂತರವಾಗಿಯೂ, ನನ್ನ ಪ್ರಾಣವನ್ನು ಆದರಿಸು. ನೀನು ನನ್ನ ಹೃದಯದ ಆಧಾರವೂ ನನ್ನ ಬಾಧ್ಯತೆಯೂ ಆಗಿರು. ನಾನು ನಿನಗೆ ಮೊರೆ ಇಡಲು, ನನಗೆ ಸಮಿಾಪವಾಗಿ, ಅಂಜ ಬೇಡವೆಂದು, ಹೇಳು.

ನಿನ್ನನ್ನು, ಕರ್ತನೇ, ಹಾರೈಸಿ ಕೊಳ್ಳುತ್ತೇನೆ. ನಿನ್ನ ಮೇಲೆ ಭರವಸವಿಡುತ್ತೇನೆ. ನನ್ನನ್ನು ನಾಚಿಕೆ ಪಡ ಗೊಡಿಸ ಬೇಡ. ಇಲ್ಲಿಂದ ತೊಲಗಿ, ನಿನ್ನ ಬಳಿಯಲ್ಲಿರ ಬೇಕೆಂದು, ಬಯಸುತ್ತೇನೆ, ಓ ಯೇಸುವೇ! ದಣಿದ ಹಾದಿಕಾರನಾದ ನಾನು ವಿಶ್ರಾಂತಿ ಪಡ ಕೊಳ್ಳ ಬೇಕೆಂದೂ, ದೇಶಾಂತ್ರಿಯಾದ ನಾನು ಸ್ವದೇಶದಲ್ಲಿ ಶೇರ ಬೇಕೆಂದೂ, ಪೀಡೆ ತಾಳಿದ ನಾನು ಪೂರ್ಣ ಉಪಶಮನ ಹೊಂದ ಬೇಕೆಂದೂ, ಆಶೆಯಾಗಿದ್ಧೇನೆ. ನನ್ನ ಕಣ್ಣುಗಳು ಕಂಡಂಥ, ನನ್ನ ಕಿವಿಗಳು ಕೇಳಿದಂಥ ಪಾಪಗಳೂ ಕಷ್ಟಗಳೂ ಹೇರಳವಾಗಿವೆ. ನನ್ನ ಜೀವದ ಎಲ್ಲಾ ದಿವಸಗಳಲ್ಲಿ ನಾನು ಪಟ್ಟ ವ್ಯಥೆಗಳು ಹೇರಳವಾಗಿವೆ. ಈಗಲಾದರೂ, ಬಹು ರಮ್ಯ

ವಾದದ್ದೆಂದು ನಾನು ಕೇಳಿದಂಥ, ಓದಿದಂಥ, ನಿನ್ನ ಸನ್ನಿಧಾನಕ್ಕೆ ಬರ ಬೇಕೆಂದು, ಅಪೇಕ್ಷಿಸುತ್ತೇನೆ. ಅಲ್ಲಿ ಕೇಡಾದರೂ ಕರಕರೆಯಾದರೂ ಇಲ್ಲ. ಅಲ್ಲಿ ಮನೋಹರವಾದ ನಿನ್ನ ಮಹಿಮೆ ಕಾಣಿಸುತ್ತದೆ. ಅಲ್ಲಿ ಪರಿಶುದ್ಧರ ಮಹಾ ಸಮೂಹವು ನೆರದು ಬಂದದೆ; ಅಲ್ಲಿ ಸಂಪೂರ್ಣವಾದ ಸಮಾಧಾನ ಆನಂದಗಳ ಸ್ಥಾನವು ಅದೆ. ಈ ನನ್ನ ಆಶೆಯನ್ನು ತುಂಬು. ನನ್ನ ಬಯಕೆಗೂ ಬಿನ್ನಹಕ್ಕೂ ನಿನ್ನ ಮನಸ್ಸಿಗೆ ಅನುಕೂಲವಾಗಿರುವ ಮೇರೆಗೆ ಒಪ್ಪಿ ಕೊಂಡು, ನಿನ್ನ ವಾಗ್ದತ್ತಗಳನ್ನೆಲ್ಲಾ ನಿನ್ನ ಹೆಸರಿನ ಸಲವಾಗಿ ನನ್ನಲ್ಲಿ ಪೂರೈಸು! ಆಮೆನ್.

---

ಪರಲೋಕಗಳಲ್ಲಿರುವ ನಮ್ಮ ತಂದೆಯೇ, ನಿನ್ನ ನಾಮವು ಪರಿಶುದ್ಧವಾಗಲಿ! ನಿನ್ನ ರಾಜ್ಯವು ಬರಲಿ! ನಿನ್ನ ಚಿತ್ತವು ಪರಲೋಕದಲ್ಲಿ ಆಗುವ ಹಾಗೆ ಭೂಮಿಯಲ್ಲಿಯೂ ಆಗಲಿ! ಅನುದಿನದ ನಮ್ಮ ರೊಟ್ಟಿಯನ್ನು ಇಂದು ನಮಗೆ ಕೊಡು! ನಾವು ನಮ್ಮ ಸಾಲಗಾರರಿಗೆ ಬಿಡುವ ಪ್ರಕಾರ, ನೀನು ನಮ್ಮ ಸಾಲಗಳನ್ನು ಬಿಡು! ನಮ್ಮನ್ನು ಶೋಧನೆಯಲ್ಲಿ ಸೇರಿಸದೆ, ಕೇಡಿಗೆ ತಪ್ಪಿಸು! ಯಾಕಂದರೆ ರಾಜ್ಯವೂ ಬಲವೂ ಮಹಿಮೆಯೂ ಯುಗಯುಗಕ್ಕೂ ನಿನ್ನವಾಗಿವೆ! ಆಮೆನ್.

ಕರ್ತನು ನಿನ್ನನ್ನು ಆಶೀರ್ವದಿಸಿ ಕಾಯಲಿ! ಕರ್ತನು ತನ್ನ ಮುಖವನ್ನು ನಿನ್ನ ಮೇಲೆ ಪ್ರಕಾಶಿಸ ಮಾಡಿ, ನಿನಗೆ ಕೃಪೆಯಾಗಿರಲಿ! ಕರ್ತನು ತನ್ನ ಮುಖವನ್ನು ನಿನ್ನ ಮೇಲೆ ಎತ್ತಿ, ನಿನಗೆ ಸಮಾಧಾನ ಕೊಡಲಿ! ಆಮೆನ್.

# CANARESE PRAYERS

---

# ಪ್ರಾರ್ಥನೆಗಳು

ಎರಡು ಸಾಮಾನ್ಯ ಪ್ರಾರ್ಥನೆಗಳು

ಮೂರು ವಾರಗಳಿಗೆ ನಾಲ್ವತ್ತೆರಡು ಪ್ರಾರ್ಥನೆಗಳು

ದೇವರ ಆಶೀರ್ವಾದವು ಮನೆಮಾರುಗಳ ಮೇಲೆ ಬರ ಬೇಕೆಂಬುವದಕ್ಕೆ
ಮಾಡುವ ಪ್ರಾರ್ಥನೆ

ಸಾಯಲಾಗಿರುವವರ ಕಿವಿಯಲ್ಲಿ ಹೇಳ ತಕ್ಕ ಮಾತುಗಳು

ಮೂರನೇ ಛಾಪೆ.

MANGALORE:
PRINTED BY STOLZ & REUTHER, BASEL MISSION PRESS
1870



